ಕರ್ನಾಟಕ ರಾಜ್ಯಪತ್ರ

ಅಧಿಕೃತವಾಗಿ ಪ್ರಕಟಿಸಲಾದುದು

| ಸಂಪುಟ ೧೪೯<br>Volume 149 | ಬೆಂಗಳೂರು, ಗುರುವಾರ, ಏಪ್ರಿಲ್ ೧೦, ೨೦೧೪ (ಚೈತ್ರ ೨೦, ಶಕ ವರ್ಷ ೧೯೩೬)<br>Bangalore, Thursday, April 10, 2014 (Chaithra 20, Shaka Varsha 1936) | ಸಂಚಿಕೆ ೧೫<br>Issue 15 |
|---|---|---|

# ಭಾಗ ೩

# ಸರ್ಕಾರದ ಆಯಾ ಇಲಾಖೆಗಳ ಮುಖ್ಯಸ್ಥರ ಮತ್ತು ಸ್ಥಳೀಯ ಪ್ರಾಧಿಕಾರಿಗಳಿಗೆ ಸಂಬಂಧಿಸಿದ ಅಧಿಸೂಚನೆಗಳು

## ವಾಣಿಜ್ಯ ತೆರಿಗೆಗಳ ಆಯುಕ್ತರು, ಕರ್ನಾಟಕ, ಬೆಂಗಳೂರು ಇವರ ನಡಾವಳಿಗಳು

**ವಿಷಯ:** ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆಡಳಿತ), ಮೌಲ್ಯವರ್ಧಿತ ತೆರಿಗೆ ವಿಭಾಗ, ದಾವಣಗೆರೆ, ಈ ವಿಭಾಗದಲ್ಲಿ ಲೆಕ್ಕಪರಿಶೋಧನೆ ಕಾರ್ಯನಿರ್ವಹಿಸುವ ಉದ್ದೇಶಕ್ಕಾಗಿ ಜಾರಿ ವಿಭಾಗದ ಕೆಲವು ಹುದ್ದೆಗಳನ್ನು ಸ್ಥಳಾಂತರಗೊಳಿಸಿ ಪುನರ್ ವ್ಯವಸ್ಥೆಯಿಂದ ಮರುನಾಮಕರಣಗೊಳಿಸುತ್ತಿರುವ ಕುರಿತು.

**ಉಲ್ಲೇಖ:**
1. ಸರ್ಕಾರದ ಆದೇಶ ಸಂಖ್ಯೆ : ಆಇ 121 ವಾತೆಸಿ 94, ದಿನಾಂಕ 04-02-1995
2. ಸರ್ಕಾರದ ಆದೇಶ ಸಂಖ್ಯೆ : ಆಇ 170 ವಾತೆಸಿ 2011, ಬೆಂಗಳೂರು, ದಿನಾಂಕ 27-08-2011
3. ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆಡಳಿತ), ಮೌ.ವ.ತೆ. ವಿಭಾಗ, ದಾವಣಗೆರೆ ಇವರ ಪತ್ರ ಸಂಖ್ಯೆ : ಪ.ಸಂ. ಸಿಬ್ಬಂದಿ 1/ ಸಿಆರ್.ಜೆಡಿಎನ್/2013-14, ದಿನಾಂಕ 29-7-2013 ಮತ್ತು ಅದೇ ಸಂಖ್ಯೆಯ ಪತ್ರ ದಿನಾಂಕ 21-10-2013.

**ಪ್ರಸ್ತಾವನೆ :**

ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆಡಳಿತ), ಮೌಲ್ಯವರ್ಧಿತ ತೆರಿಗೆ ವಿಭಾಗ, ದಾವಣಗೆರೆ ಇವರು ತಮ್ಮ ಉಲ್ಲೇಖ (3)ರ ಪತ್ರಗಳಲ್ಲಿ ದಾವಣಗೆರೆ ವಿಭಾಗದಲ್ಲಿರುವ ನೊಂದಾಯಿತ/ಅನೊಂದಾಯಿತ ವರ್ತಕರ ಪ್ರಕರಣಗಳಲ್ಲಿ ಲೆಕ್ಕಪುಸ್ತಕಗಳನ್ನು ಪರಿಶೀಲಿಸಿ ಕರನಿರ್ಧಾರಣೆ/ಮರುಕರನಿರ್ಧಾರಣೆ ಕಾರ್ಯಗಳನ್ನು ಕೈಗೊಳ್ಳುವ ಉದ್ದೇಶಕ್ಕಾಗಿ ತಮ್ಮ ವಿಭಾಗಕ್ಕೆ ಮಂಜೂರಾಗಿರುವ ಲೆಕ್ಕಪರಿಶೋಧನೆ ಕಛೇರಿಗಳನ್ನು ಪರಿಶೀಲಿಸಿ ಹಾಲಿ ಈ ಉದ್ದೇಶಕ್ಕೆ ಮಂಜೂರಾಗಿರುವ ಹುದ್ದೆಗಳು ನೊಂದಾಯಿತ ವರ್ತಕರ ಅನುಪಾತಕ್ಕೆ ಸಂಬಂಧಿಸಿದಂತೆ ಕಡಿಮೆಯಾಗಿದೆ ಎಂದು ತಿಳಿಸುತ್ತಾ ಕರನಿರ್ಧಾರಣೆ/ಮರುಕರನಿರ್ಧಾರಣೆ ಕೈಗೊಂಡು ರಾಜಸ್ವ ಸಂಗ್ರಹಣೆಗೆ ಸಹಕಾರಿಯಾಗಿ ತಮ್ಮ ವಿಭಾಗಕ್ಕೆ ನಿಗದಿಪಡಿಸಿರುವ ತೆರಿಗೆ ಸಂಗ್ರಹಣೆಯ ಗುರಿ ತಲುಪುವ ಉದ್ದೇಶಕ್ಕಾಗಿ ಹೆಚ್ಚುವರಿಯಾಗಿ 3-ವಾಣಿಜ್ಯ ತೆರಿಗೆ ಉಪ ಆಯುಕ್ತರು, 5-ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು ಮತ್ತು 4-ವಾಣಿಜ್ಯ ತೆರಿಗೆ ಅಧಿಕಾರಿಗಳ ಹುದ್ದೆಗಳೂ ಸೇರಿದಂತೆ, ಒಟ್ಟು ಹನ್ನೆರಡು ಹುದ್ದೆಗಳನ್ನು ಸೃಜಿಸುವಂತೆ ದಿನಾಂಕ 29-7-2013ರ ಪತ್ರದಲ್ಲಿ ಕೋರಿರುತ್ತಾರೆ. ಮುಂದುವರೆದು, ಸದರಿ ಹನ್ನೆರಡು ಹುದ್ದೆಗಳನ್ನು ಸೃಜಿಸಲು ವಿಳಂಬವಾಗುವ ಪಕ್ಷದಲ್ಲಿ ಬಳ್ಳಾರಿ, ಹೊಸಪೇಟೆ, ಕೊಪ್ಪಳ, ಚಿತ್ರದುರ್ಗ ಹಾಗೂ ಚಳ್ಳಕೆರೆ ಕೇಂದ್ರ ಸ್ಥಾನಗಳಿಗೆ ಲೆಕ್ಕಪರಿಶೋಧನೆ ಮತ್ತು ವಸೂಲಿ ಕಛೇರಿಗಳನ್ನು ಆದಷ್ಟು ತ್ವರಿತವಾಗಿ ಸೃಜಿಸಲು ಕೋರಿರುತ್ತಾರೆ. ಸದರಿ ಕಛೇರಿಗಳನ್ನು ಸೃಜಿಸಿ ಅಧಿಕಾರಿಗಳನ್ನು ನಿಯೋಜನೆಗೊಳಿಸಿದಲ್ಲಿ ಆಯಾ ಪ್ರದೇಶಕ್ಕೆ ಸಂಬಂಧಿಸಿದ ಪ್ರಕರಣಗಳಲ್ಲಿ ಕ.ಮೌ.ತೆ. ಕಾಯ್ದೆ ಮತ್ತು ಇತರೆ ಕಾಯ್ದೆಗಳಡಿಯಲ್ಲಿ ತ್ವರಿತವಾಗಿ ಕರನಿರ್ಧಾರಣೆ ಮತ್ತು ಮರುಕರನಿರ್ಧಾರಣೆ ಕೈಗೊಳ್ಳಲು ಸಾಧ್ಯವಾಗಿ ವಿಭಾಗದ ತೆರಿಗೆ ಸಂಗ್ರಹಣೆಯ ಗುರಿ ತಲುಪುವಲ್ಲಿ ಗಣನೀಯ ಯಶಸ್ಸು ಸಾಧಿಸಲು ಸಾಧ್ಯವಾಗುತ್ತದೆ ಎಂದು ಜಂಟಿ ಆಯುಕ್ತರು ತಿಳಿಸಿರುತ್ತಾರೆ.

ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆಡಳಿತ), ಮೌಲ್ಯವರ್ಧಿತ ತೆರಿಗೆ ವಿಭಾಗ, ದಾವಣಗೆರೆ ಇವರ ಪ್ರಸ್ತಾವನೆಯನ್ನು ಪರಿಶೀಲಿಸಲಾಗಿ, ಪ್ರಸ್ತುತ ಹೆಚ್ಚುವರಿ ಹುದ್ದೆಗಳನ್ನು ತಕ್ಷಣಕ್ಕೆ ಸೃಜಿಸಲು ಕಷ್ಟಸಾಧ್ಯವಾಗುತ್ತದೆ. ಆದಾಗ್ಯೂ ಕರನಿರ್ಧಾರಣೆ/ಮರುಕರನಿರ್ಧಾರಣೆ ಪ್ರಕ್ರಿಯೆ ಕೈಗೊಳ್ಳಲು ಹಾಗೂ ಈ ಪ್ರಕ್ರಿಯೆಗಳಿಂದ ಸೃಜಿಸಲ್ಪಟ್ಟ ತೆರಿಗೆಯನ್ನು ವಸೂಲಿ ಮಾಡಿ ಇಲಾಖೆಗೆ ನಿಗದಿಪಡಿಸಿರುವ ಕರ ಸಂಗ್ರಹಣಾ ಗುರಿಯನ್ನು ತಲುಪಲು ಹಾಗೂ ರಾಜಸ್ವ ಸಂಗ್ರಹಣೆಯ ಹಿತದೃಷ್ಟಿಯಿಂದ ಮತ್ತು ಕಾಯ್ದೆಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವ ಉದ್ದೇಶದಿಂದ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಜಾರಿ), (ಕೇಂದ್ರ ವಲಯ), ಬಳ್ಳಾರಿ ಈ ವಲಯದಲ್ಲಿ ಹೆಚ್ಚುವರಿಯಾದ ಕಛೇರಿಗಳು ಲಭ್ಯವಿರುವುದು ಮನಗಂಡು, ಈ ರೀತಿ ಸದರಿ ವಲಯದಲ್ಲಿ ಹೆಚ್ಚುವರಿಯಾಗಿ ಕಾರ್ಯನಿರ್ವಹಿಸುತ್ತಿರುವ ಕೆಲವು ಕಛೇರಿಗಳನ್ನು ಆ ವಿಭಾಗದಿಂದ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆಡಳಿತ), ಮೌ.ತೆ. ವಿಭಾಗ, ದಾವಣಗೆರೆ ಈ

ವಿಭಾಗಕ್ಕೆ ಸ್ಥಳಾಂತರಗೊಳಿಸಿ ಜಾರಿ ಕಛೇರಿಗಳನ್ನು ಲೆಕ್ಕಪರಿಶೋಧನೆ ಮತ್ತು ವಸೂಲಿ ಕಛೇರಿಗಳೆಂದು ಪುನರ್ ವ್ಯವಸ್ಥೆಯಿಂದ ಮರುನಾಮಕರಣಗೊಳಿಸಲು ಉದ್ದೇಶಿಸಲಾಗಿದೆ. ಈ ರೀತಿ ಜಾರಿ ವಿಭಾಗದಿಂದ ಕಛೇರಿಗಳನ್ನು ಸ್ಥಳಾಂತರಿಸಿ ಆಡಳಿತ ವಿಭಾಗದಲ್ಲಿ ಲೆಕ್ಕಪರಿಶೋಧನೆ ಮತ್ತು ವಸೂಲಿ ಕಛೇರಿಗಳೆಂದು ಮರುನಾಮಕರಣಗೊಳಿಸಲು ಉದ್ದೇಶಿಸಿರುವ ಕಛೇರಿಗಳಿಗೆ ಹಾಲಿ ಜಾರಿ ವಿಭಾಗದಲ್ಲಿನ ಕಛೇರಿಗಳಿಗೆ ಮಂಜೂರಾಗಿರುವ ಹುದ್ದೆಗಳನ್ನು ಸಹ ಮರುನಾಮಕರಣಗೊಳಿಸುತ್ತಿರುವ ಕಛೇರಿಗಳಿಗೆ ಸ್ಥಳಾಂತರಿಸಲು ಉದ್ದೇಶಿಸಲಾಗಿದೆ. ಹಾಲಿ ಜಾರಿ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿರುವ ಕಛೇರಿ ಹಾಗೂ ಹುದ್ದೆಗಳ ವಿವರಗಳು ಈ ಕೆಳಗಿನ ಕೋಷ್ಟಕ 1 ರಂತಿರುತ್ತದೆ.

**ಕೋಷ್ಟಕ–1**

| ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಕಛೇರಿಗಳ ಪದನಾಮ ಹಾಗೂ ಮಂಜೂರಾದ ಹುದ್ದೆಗಳ ವಿವರಗಳು | | | | | | | | | | | | |
|---|---|---|---|---|---|---|---|---|---|---|---|---|
| ಕ್ರ. ಸಂ. | ಹಾಲಿ ಇರುವ ಕಛೇರಿ/ ಹುದ್ದೆಗಳ ಪದನಾಮ | ವಾತೆ ಸಆ | ವಾ.ತೆ.ಅ. | ವಾ.ತೆ.ಪ. | ಶೀ.ಲಿ. | ಪ್ರ.ದ.ಸ. | ದ್ವಿ.ದ.ಸ. | ಬೆರಳಚ್ಚು ಗಾರರು | ಕರವಸೂ ಲಿಗಾರರು | ಡಿ ದರ್ಜೆ ನೌಕರರು | ವಾಹನ ಚಾಲಕರು | ಒಟ್ಟು |
| **1** | **2** | **3** | **4** | **5** | **6** | **7** | **8** | **9** | **10** | **11** | **12** | **13** |
| 1 | ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, (ಜಾರಿ)–3, ಬಳ್ಳಾರಿ | 1 | 0 | 1 | 0 | 0 | 1 | 0 | 0 | 1 | 1 | 5 |
| 2 | ವಾಣಿಜ್ಯ ತೆರಿಗೆ ಅಧಿಕಾರಿ (ಜಾರಿ)–5, ಬಳ್ಳಾರಿ | 0 | 1 | 1 | 0 | 0 | 0 | 0 | 0 | 0 | 0 | 2 |
| 3 | ವಾಣಿಜ್ಯ ತೆರಿಗೆ ಅಧಿಕಾರಿ (ಜಾರಿ)–3, ಹೊಸಪೇಟೆ | 0 | 1 | 1 | 0 | 0 | 1 | 0 | 0 | 1 | 0 | 4 |
| 4 | ವಾಣಿಜ್ಯ ತೆರಿಗೆ ಅಧಿಕಾರಿ (ಜಾರಿ)–4, ಹೊಸಪೇಟೆ | 0 | 1 | 1 | 0 | 0 | 1 | 0 | 0 | 1 | 0 | 4 |
| 5 | ವಾಣಿಜ್ಯ ತೆರಿಗೆ ಅಧಿಕಾರಿ (ಜಾರಿ)–2, ಚಳ್ಳಕೆರೆ | 0 | 1 | 1 | 0 | 0 | 0 | 0 | 0 | 0 | 0 | 2 |
| | **ಒಟ್ಟು** | **1** | **4** | **5** | **0** | **0** | **3** | **0** | **0** | **3** | **1** | **17** |

ಜಾರಿ ವಿಭಾಗದಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿಗಳಿಗೆ ಪ್ರಸ್ತುತ ವ್ಯಾಪಾರ ಸ್ಥಳಗಳ ಹಾಗೂ ಸರಕು ವಾಹನಗಳ ತಪಾಸಣೆ ಅಧಿಕಾರ ವ್ಯಾಪ್ತಿ ಮಾತ್ರವಿದ್ದು, ಅವರುಗಳಿಗೆ ಕಛೇರಿಗಳ ಮರುನಾಮಕರಣಗೊಳಿಸಿ ಲೆಕ್ಕಪರಿಶೋಧನೆ, ಕರನಿರ್ಧಾರಣೆ/ಮರುಕರನಿರ್ಧಾರಣೆ ಹಾಗೂ ತೆರಿಗೆ ಬಾಕಿ ವಸೂಲಿ ಅಧಿಕಾರಗಳನ್ನು ನೀಡಿದಲ್ಲಿ ರಾಜಸ್ವ ಸಂಗ್ರಹಣೆಗೆ ಅನುಕೂಲವಾಗುತ್ತದೆಯೆಂದು ಕಂಡುಬಂದಿರುತ್ತದೆ. ಅದರಂತೆ ಮೇಲ್ಕಂಡ ಕೋಷ್ಟಕ–1 ರಲ್ಲಿ ನಮೂದಿಸಿರುವ ಜಾರಿ ಕಛೇರಿಗಳನ್ನು ಪುನರ್ ವ್ಯವಸ್ಥೆಗೊಳಿಸಿ ಸದರಿ ಕಛೇರಿಗಳನ್ನು ಲೆಕ್ಕಪರಿಶೋಧನೆ ಮತ್ತು ವಸೂಲಿ ಕಛೇರಿಗಳೆಂದು ಕೋಷ್ಟಕ–2ರ ಕಂಡಿಕೆ (2) ರಲ್ಲಿ ನಮೂದಿಸಿರುವಂತೆ ಪುನರ್ ವ್ಯವಸ್ಥೆಗೊಳಿಸಿ ಪುನರ್‌ನಾಮಕರಣಗೊಳಿಸಲು ಉದ್ದೇಶಿಸಲಾಗಿದೆ.

**ಕೋಷ್ಟಕ–2**

ಕಛೇರಿಗಳ ಪುನರ್ ವ್ಯವಸ್ಥೆ ಹಾಗೂ ಮರು ನಾಮಕರಣದಿಂದ ಬದಲಾದ ಕಛೇರಿಗಳಿಗೆ ಸಂಬಂಧಿಸಿದಂತೆ ಅಧಿಕಾರಿ ಹಾಗೂ ಸಿಬ್ಬಂದಿ ವರ್ಗದವರನ್ನು ನಿಯೋಜಿಸಲು ಉದ್ದೇಶಿಸಿರುವ ವಿವರ ಈ ಕೆಳಕಂಡಂತಿರುತ್ತದೆ

| ಕ್ರ. ಸಂ. | ಪುನರ್ ವ್ಯವಸ್ಥೆಯಿಂದ ಮರುನಾಮಕರಣಗೊಳಿ ಸಲು ಉದ್ದೇಶಿಸಿರುವ ಕಛೇರಿಯ ಪದನಾಮ | ಸಂಬಳ ಹಾಗೂ ಇತರೆ ಭತ್ಯೆಗಳ ಬಟಾವಡೆ ಮಾಡಲು ಅಧಿಕಾರ ಹೊಂದಿರುವ ಅಧಿಕಾರಿಗಳು | ವಾ.ತೆ ಸ.ಆ | ವಾ.ತೆ ಅ. | ವಾ.ತೆ. ಪ. | ಪ್ರ.ದ. ಸ | ಶೀಘ್ರ ಲಿಪಿ ಗಾರರು | ದ್ವಿ.ದ.ಸ. | ಬೆರಳಚ್ಚು ಗಾರರು | ಕರ ವಸೂಲಿಗಾ ರರು | ಡಿ ದರ್ಜೆ ನೌಕರರು | ವಾಹನ ಚಾಲ ಕರು | ಒಟ್ಟು ಹುದ್ದೆ ಗಳು |
|---|---|---|---|---|---|---|---|---|---|---|---|---|---|
| **1** | **2** | **3** | **4** | **5** | **6** | **7** | **8** | **9** | **10** | **11** | **12** | **13** | **14** |
| 1 | ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, (ಲೆಕ್ಕ ಪರಿಶೋಧನೆ ಮತ್ತು ವಸೂಲಿ) ಬಳ್ಳಾರಿ | ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು (ಲೆಪ ಮತ್ತು ವ), ಬಳ್ಳಾರಿ | 1 | 0 | 1 | 1 | 1 | 1 | 0 | 1 | 1 | 1 | 8 |
| 2 | ವಾಣಿಜ್ಯ ತೆರಿಗೆ ಅಧಿಕಾರಿ, (ಲೆಕ್ಕ ಪರಿಶೋ ಧನೆ ಮತ್ತು ವಸೂಲಿ) ಬಳ್ಳಾರಿ | | 0 | 1 | 1 | 0 | 0 | 1 | 1 | | 1 | 0 | 5 |
| 3 | ವಾಣಿಜ್ಯ ತೆರಿಗೆ ಅಧಿಕಾರಿ, (ಲೆಕ್ಕ ಪರಿಶೋ ಧನೆ ಮತ್ತು ವಸೂಲಿ)–1 ಹೊಸಪೇಟೆ | ವಾಣಿಜ್ಯ ತೆರಿಗೆ ಅಧಿಕಾರಿ, (ಲೆಪ ಮತ್ತು ವ)–1 ಹೊಸಪೇಟೆ | 0 | 1 | 1 | 1 | 0 | 1 | 1 | 1 | 1 | 0 | 7 |
| 4 | ವಾಣಿಜ್ಯ ತೆರಿಗೆ ಅಧಿಕಾರಿ, (ಲೆಕ್ಕ ಪರಿಶೋ ಧನೆ ಮತ್ತು ವಸೂಲಿ)–2 ಹೊಸಪೇಟೆ | | 0 | 1 | 1 | – | 0 | 1 | | | 1 | 0 | 4 |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 | 14 |
|---|---|---|---|---|---|---|---|---|---|---|---|---|---|
| 5 | ವಾಣಿಜ್ಯ ತೆರಿಗೆ ಅಧಿಕಾರಿ, (ಲೆಕ್ಕ ಪರಿಶೋ ಧನೆ ಮತ್ತು ವಸೂಲಿ) ಚಳ್ಳಕೆರೆ | ವಾಣಿಜ್ಯ ತೆರಿಗೆ ಅಧಿಕಾರಿ, (ಲೆಪ ಮತ್ತು ವ) ಚಳ್ಳಕೆರೆ | 0 | 1 | 1 | 1 | 0 | 0 | 1 | 1 | 1 | 0 | 6 |

**ಕೋಷ್ಠಕ–1** ರಲ್ಲಿ ನಮೂದಿಸಿರುವ ಕೆಲವು ಕಛೇರಿಗಳಲ್ಲಿ ಅಗತ್ಯ ಸಿಬ್ಬಂದಿ ವರ್ಗದವರು ಲಭ್ಯವಿಲ್ಲದ ಪ್ರಯುಕ್ತ ಈ ಕೆಳಕಂಡ ಕಛೇರಿಗಳಿಂದ ಕೋಷ್ಠಕ–3 ರಲ್ಲಿಯ ಅಂಕಣ (2) ರಲ್ಲಿ ನಮೂದಿಸಿರುವಂತೆ ಸಿಬ್ಬಂದಿ ವರ್ಗದವರನ್ನು ಕೋಷ್ಠಕ–2ರ ಅಂಕಣ–7 ರಿಂದ 12 ರಲ್ಲಿ ನಮೂದಿಸಿರುವ ಕೆಲವು ಹುದ್ದೆಗಳನ್ನು ಸದರಿ ಕೋಷ್ಠಕದ ಅಂಕಣ (2) ರಲ್ಲಿ ನಮೂದಿಸಿರುವ ಕಛೇರಿಗಳಿಗೆ ಮರುಹಂಚಿಕೆ ಮಾಡಿ ನಿಯೋಜಿಸಲು ಉದ್ದೇಶಿಸಲಾಗಿದೆ.

**ಕೋಷ್ಠಕ–3**

**ಕೊರತೆಯಿದ್ದ ಹುದ್ದೆಗಳನ್ನು ಸ್ಥಳಾಂತರಿಸಲು ಉದ್ದೇಶಿಸಿರುವುದು**

| | |
|---|---|
| ಪ್ರ.ದ.ಸ. | 1. ಒಂದು ಹುದ್ದೆಯನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, ಎಲ್.ವಿ.ಓ. 495 ಬಳ್ಳಾರಿ ಈ ಕಛೇರಿಯಿಂದ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು (ಲೆ.ಪ.ಮತ್ತು ವ), ಬಳ್ಳಾರಿ ಈ ಕಛೇರಿಗೆ ಸ್ಥಳಾಂತರಿಸಲು ಉದ್ದೇಶಿಸಲಾಗಿದೆ.<br>2. ಒಂದು ಹುದ್ದೆಯನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು ಎಲ್.ವಿ.ಓ. 500 ಹೊಸಪೇಟೆ ಈ ಕಛೇರಿಯಿಂದ ವಾಣಿಜ್ಯ ತೆರಿಗೆ ಅಧಿಕಾರಿ (ಲೆ.ಪ.ಮತ್ತು ವ)–1 ಹೊಸಪೇಟೆ ಈ ಕಛೇರಿಗೆ ಸ್ಥಳಾಂತರಿಸಲು ಉದ್ದೇಶಿಸಲಾಗಿದೆ.<br>3. ಒಂದು ಹುದ್ದೆಯನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, ಎಲ್.ವಿ.ಓ. 485 ಚಳ್ಳಕೆರೆ ಈ ಕಛೇರಿಯಿಂದ ವಾಣಿಜ್ಯ ತೆರಿಗೆ ಅಧಿಕಾರಿ (ಲೆ.ಪ.ಮತ್ತು ವ) ಚಳ್ಳಕೆರೆ ಈ ಕಛೇರಿಗೆ ಸ್ಥಳಾಂತರಿಸಲು ಉದ್ದೇಶಿಸಲಾಗಿದೆ. |
| ಶೀಘ್ರಲಿಪಿಗಾರರು | 1. ಒಂದು ಹುದ್ದೆಯನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, ಎಲ್.ವಿ.ಓ. 495 ಬಳ್ಳಾರಿ ಈ ಕಛೇರಿಯಿಂದ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು (ಲೆ.ಪ. ಮತ್ತು ವ), ಬಳ್ಳಾರಿ ಈ ಕಛೇರಿಗೆ ಸ್ಥಳಾಂತರಿಸಲು ಉದ್ದೇಶಿಸಲಾಗಿದೆ. |
| ದ್ವಿತೀಯ ದರ್ಜೆ ಸಹಾಯಕರು | 1. ಒಂದು ಹುದ್ದೆಯನ್ನು ವಾಣಿಜ್ಯ ತೆರಿಗೆ ಉಪ ಆಯುಕ್ತರು, (ಲೆ.ಪ.ಮತ್ತು ವ), ಬಳ್ಳಾರಿ ಇವರ ಕಛೇರಿಯಿಂದ ವಾಣಿಜ್ಯ ತೆರಿಗೆ ಅಧಿಕಾರಿ, (ಲೆ.ಪ. ಮತ್ತು ವ) ಬಳ್ಳಾರಿ ಈ ಕಛೇರಿಗೆ ಸ್ಥಳಾಂತರಿಸಲು ಉದ್ದೇಶಿಸಲಾಗಿದೆ. |
| ಬೆರಳಚ್ಚುಗಾರರು | 1. ಒಂದು ಹುದ್ದೆಯನ್ನು ವಾಣಿಜ್ಯ ಜಂಟಿ ಆಯುಕ್ತರ ಕಛೇರಿ, ಬಳ್ಳಾರಿ ಈ ಕಛೇರಿಯಿಂದ ವಾಣಿಜ್ಯ ತೆರಿಗೆ ಅಧಿಕಾರಿ, (ಲೆ.ಪ. ಮತ್ತು ವ) ಬಳ್ಳಾರಿ ಈ ಕಛೇರಿಗೆ ಸ್ಥಳಾಂತರಿಸಲು ಉದ್ದೇಶಿಸಲಾಗಿದೆ.<br>2. ಒಂದು ಹುದ್ದೆಯನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, ಎಲ್.ವಿ.ಓ. 500 ಹೊಸಪೇಟೆ ಈ ಕಛೇರಿಯಿಂದ ವಾಣಿಜ್ಯ ತೆರಿಗೆ ಅಧಿಕಾರಿ, (ಲೆ.ಪ. ಮತ್ತು ವ)–1 ಹೊಸಪೇಟೆ ಈ ಕಛೇರಿಗೆ ಸ್ಥಳಾಂತರಿಸಲು ಉದ್ದೇಶಿಸಲಾಗಿದೆ.<br>3. ಒಂದು ಹುದ್ದೆಯನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, ಎಲ್.ವಿ.ಓ. 485, ಚಳ್ಳಕೆರೆ ಈ ಕಛೇರಿಯಿಂದ ವಾಣಿಜ್ಯ ತೆರಿಗೆ ಅಧಿಕಾರಿ, (ಲೆ.ಪ. ಮತ್ತು ವ) ಚಳ್ಳಕೆರೆ ಈ ಕಛೇರಿಗೆ ಸ್ಥಳಾಂತರಿಸಲು ಉದ್ದೇಶಿಸಲಾಗಿದೆ. |
| ಕರವಸೂಲಿಗಾರರು | 1. ಒಂದು ಹುದ್ದೆಯನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, ಎಲ್.ವಿ.ಓ. 495 ಬಳ್ಳಾರಿ ಈ ಕಛೇರಿಯಿಂದ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, (ಲೆ.ಪ. ಮತ್ತು ವ) ಬಳ್ಳಾರಿ ಈ ಕಛೇರಿಗೆ ಸ್ಥಳಾಂತರಿಸಲು ಉದ್ದೇಶಿಸಲಾಗಿದೆ.<br>2. ಒಂದು ಹುದ್ದೆಯನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, ಎಲ್.ವಿ.ಓ. 500 ಹೊಸಪೇಟೆ ಈ ಕಛೇರಿಯಿಂದ ವಾಣಿಜ್ಯ ತೆರಿಗೆ ಅಧಿಕಾರಿ, (ಲೆ.ಪ. ಮತ್ತು ವ)–1 ಹೊಸಪೇಟೆ ಈ ಕಛೇರಿಗೆ ಸ್ಥಳಾಂತರಿಸಲು ಉದ್ದೇಶಿಸಲಾಗಿದೆ.<br>3. ಒಂದು ಹುದ್ದೆಯನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, ಎಲ್.ವಿ.ಓ. 485, ಚಳ್ಳಕೆರೆಯಿಂದ ವಾಣಿಜ್ಯ ತೆರಿಗೆ ಅಧಿಕಾರಿ, (ಲೆ.ಪ. ಮತ್ತು ವ) ಚಳ್ಳಕೆರೆ ಈ ಕಛೇರಿಗೆ ಸ್ಥಳಾಂತರಿಸಲು ಉದ್ದೇಶಿಸಲಾಗಿದೆ. |

| | |
|---|---|
| ಗ್ರೂಪ್ "ಡಿ" ನೌಕರರು | 1. ಒಂದು ಹುದ್ದೆಯನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಎಲ್.ವಿ.ಓ. 495, ಬಳ್ಳಾರಿ ಈ ಕಛೇರಿಯಿಂದ ವಾಣಿಜ್ಯ ತೆರಿಗೆ ಅಧಿಕಾರಿ, (ಲೆ.ಪ. ಮತ್ತು ವ) ಬಳ್ಳಾರಿ ಈ ಕಛೇರಿಗೆ ಸ್ಥಳಾಂತರಿಸಲು ಉದ್ದೇಶಿಸಲಾಗಿದೆ.<br>2. ಒಂದು ಹುದ್ದೆಯನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, ಎಲ್.ವಿ.ಓ. 485, ಚಳ್ಳಕೆರೆ ಈ ಕಛೇರಿಯಿಂದ ವಾಣಿಜ್ಯ ತೆರಿಗೆ ಅಧಿಕಾರಿ, (ಲೆ.ಪ. ಮತ್ತು ವ) ಚಳ್ಳಕೆರೆ ಈ ಕಛೇರಿಗೆ ಸ್ಥಳಾಂತರಿಸಲು ಉದ್ದೇಶಿಸಲಾಗಿದೆ. |

ಉಲ್ಲೇಖ (1)ರ ಸರ್ಕಾರದ ಆದೇಶ ಸಂಖ್ಯೆ : ಆಇ 121 ವಾತೆಸಿ 94 ದಿನಾಂಕ 04-02-1995 ರಲ್ಲಿ ವಾಣಿಜ್ಯ ತೆರಿಗೆ ಇಲಾಖೆಯ ಯಾವುದೇ ಕೇಂದ್ರ ಸ್ಥಾನದಲ್ಲಿರುವ ಕಛೇರಿಗಳನ್ನು ಅದೇ ಕೇಂದ್ರ ಸ್ಥಾನದಲ್ಲಿರುವಂತೆ ಪುನರ್ ವಿಂಗಡಿಸುವ, ಸ್ಥಳಾಂತರಿಸುವ ಮತ್ತು ಪುನರ್ ವ್ಯವಸ್ಥೆಯನ್ನು ಮಾಡುವ ಅಧಿಕಾರವನ್ನು ವಾಣಿಜ್ಯ ತೆರಿಗೆ ಆಯುಕ್ತರಿಗೆ ಪ್ರತ್ಯಾಯೋಜಿಸಿ ಆದೇಶ ನೀಡಿದೆ. ಈ ಹಿನ್ನೆಲೆಯಲ್ಲಿ ಕೋಷ್ಠಕ-1ರ ಅಂಕಣ (2) ರಲ್ಲಿ ನಮೂದಿಸಿರುವ ಜಾರಿ ವಿಭಾಗದ ಕಛೇರಿಗಳನ್ನು ಕೋಷ್ಠಕ-2ರ ಅಂಕಣ(1) ರಲ್ಲಿ ನಮೂದಿಸಿರುವಂತೆ ಆಡಳಿತ ವಿಭಾಗಕ್ಕೆ ಸ್ಥಳಾಂತರಗೊಳಿಸಿ ಈ ರೀತಿ ಸ್ಥಳಾಂತರಗೊಳಿಸಿರುವ ಕಛೇರಿಗಳಿಗೆ ಲೆಕ್ಕಪರಿಶೋಧನೆ ಮತ್ತು ವಸೂಲಿ ಕಛೇರಿಗಳೆಂದು ಪುನರ್‌ವ್ಯವಸ್ಥೆಗೊಳಿಸುವ ಮೂಲಕ, ಕರನಿರ್ಧಾರಣೆ/ಮರುಕರನಿರ್ಧಾರಣೆ/ತೆರಿಗೆ ವಸೂಲಾತಿ ಮುಂತಾದ ಪ್ರಕ್ರಿಯೆಗಳಿಂದ ಇಲಾಖೆಗೆ ನಿಗದಿಪಡಿಸಿರುವ ತೆರಿಗೆ ಗುರಿಯನ್ನು ತಲುಪುವ ಉದ್ದೇಶದಿಂದ ಹಾಗೂ ಕಾಯ್ದೆಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವ ಉದ್ದೇಶಕ್ಕಾಗಿ, ಮರುನಾಮಕರಣಗೊಳಿಸುವುದು ಸೂಕ್ತವೆಂದು ಕಂಡುಬಂದಿರುತ್ತದೆ. ಅಲ್ಲದೇ ಮರುನಾಮಕರಣಗೊಳಿಸುತ್ತಿರುವ ಕಛೇರಿಗಳಿಗೆ ಸಂಬಂಧಿಸಿದಂತೆ ಯಾವುದೇ ಆರ್ಥಿಕ ಹೊರೆ ಉಂಟಾಗುವುದಿಲ್ಲವಾದ್ದರಿಂದ ಮರುನಾಮಕರಣಗೊಳಿಸುತ್ತಿರುವ ಕಛೇರಿಗಳು ಹಾಗೂ ಮರು ನಾಮಕರಣಗೊಳಿಸುತ್ತಿರುವ ಕಛೇರಿಗಳಿಗೆ ಕಾರ್ಯನಿರ್ವಹಿಸಲು ಒದಗಿಸಲು ಉದ್ದೇಶಿಸಿರುವ ಅಧಿಕಾರಿ ಹಾಗೂ ಸಿಬ್ಬಂದಿ ವರ್ಗದವರು ಒಂದೇ ಕೇಂದ್ರಸ್ಥಾನದಲ್ಲಿ ಇರುವುದರಿಂದ ಆಡಳಿತಾತ್ಮಕವಾಗಿ ಯಾವುದೇ ವ್ಯತ್ಯಯ ಉಂಟಾಗುವುದಿಲ್ಲ ಎಂಬುದನ್ನು ಮನಗಂಡ ಹಿನ್ನೆಲೆಯಲ್ಲಿ ಈ ಕೆಳಕಂಡಂತೆ ಆದೇಶ ಹೊರಡಿಸಲಾಗಿದೆ.

**ಆದೇಶ ಸಂಖ್ಯೆ : ಸಆ (ಸಿ-1) ಸಿಆರ್. 14/ಇತರೆ/ 13-14, ದಿನಾಂಕ 30-12-2013**

ಮೇಲಿನ ಪ್ರಸ್ತಾವನೆಯಲ್ಲಿ ವಿವರಿಸಿರುವ ಕಾರಣಗಳ ಹಿನ್ನೆಲೆಯಲ್ಲಿ ಉಲ್ಲೇಖ (1)ರ ಸರ್ಕಾರದ ಆದೇಶ ದಿನಾಂಕ 04-02-1995 ರಲ್ಲಿ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ ಶ್ರೀ ಅಜಯ್ ಸೇಠ್, ಭಾ.ಆ.ಸೇ. ವಾಣಿಜ್ಯ ತೆರಿಗೆ ಆಯುಕ್ತರು (ಕರ್ನಾಟಕ) ಬೆಂಗಳೂರು, ಆದ ನಾನು ವರ್ತಕರು ಸಲ್ಲಿಸಿರುವ ತೆರಿಗೆ ಪಟ್ಟಿಗಳನ್ನು ಪರಿಶೀಲಿಸಲು ಹಾಗೂ ಅವರು ನಿರ್ವಹಿಸಿರುವ ದಸ್ತಾವೇಜುಗಳನ್ನು ಪರಿಶೀಲಿಸುವ ಮೂಲಕ ಪಾವತಿಸಿರುವ/ಪಾವತಿಸಬೇಕಾಗಿರುವ ತೆರಿಗೆ, ಹೂಡುವಳಿ ತೆರಿಗೆಯ ಬಗ್ಗೆ ಮತ್ತು ಮಾಸಿಕ ನಮೂನೆಗಳನ್ನು ಸಮಗ್ರವಾಗಿ ಪರಿಶೀಲಿಸಿ ತೆರಿಗೆ ಸೋರುವಿಕೆಯನ್ನು ತಡೆಗಟ್ಟಿ ರಾಜಸ್ವ ಸಂಗ್ರಹಣೆಯನ್ನು ಹೆಚ್ಚಿಸುವ ಹಿತದೃಷ್ಟಿಯಿಂದ ಕರ್ನಾಟಕ ಮೌಲ್ಯವರ್ಧಿತ ತೆರಿಗೆ 2003, ಕರ್ನಾಟಕ ಮಾರಾಟ ತೆರಿಗೆ ಕಾಯ್ದೆ, 1957, ಕೇಂದ್ರ ಮಾರಾಟ ತೆರಿಗೆ ಕಾಯ್ದೆ, 1956, ಕರ್ನಾಟಕ ಪ್ರವೇಶ ತೆರಿಗೆ ಕಾಯ್ದೆ 1979ರ ಕಾಯ್ದೆಗಳಡಿಯಲ್ಲಿ ಕರನಿರ್ಧರಣೆ/ಮರುಕರನಿರ್ಧರಣೆ/ವಸೂಲಾತಿ ಮುಂತಾದ ಪ್ರಕ್ರಿಯೆಗಳಿಂದ ಹೆಚ್ಚುವರಿ ತೆರಿಗೆ ಸಂಗ್ರಹಣೆಯ ಉದ್ದೇಶಕ್ಕಾಗಿ ಹಾಗೂ ಕಾಯ್ದೆಗಳನ್ನು ಪರಿಣಾಮಕಾರಿಯಾಗಿ ಜಾರಿಗೊಳಿಸುವ ಉದ್ದೇಶಕ್ಕಾಗಿ ಈ ಕೆಳಗಿನ ಕೋಷ್ಠಕ-1ರ ಅಂಕಣ (2) ರಲ್ಲಿ ನಮೂದಿಸಿರುವ ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಜಾರಿ), (ಕೇಂದ್ರ ವಲಯ) ಬಳ್ಳಾರಿ ವಲಯದಲ್ಲಿರುವ ಕಛೇರಿಗಳನ್ನು ವಾಣಿಜ್ಯ ತೆರಿಗೆ ಜಂಟಿ ಆಯುಕ್ತರು (ಆಡಳಿತ), ಮೌಲ್ಯವರ್ಧಿತ ತೆರಿಗೆ ವಿಭಾಗ, ದಾವಣಗೆರೆ ಈ ವಿಭಾಗಕ್ಕೆ ಸ್ಥಳಾಂತರಗೊಳಿಸಿ ಸದರಿ ಕಛೇರಿಗಳನ್ನು ಲೆಕ್ಕಪರಿಶೋಧನೆ ಮತ್ತು ವಸೂಲಿ ಕಛೇರಿಗಳೆಂದು ಕೋಷ್ಠಕ-2ರ ಅಂಕಣ (2) ರಲ್ಲಿ ನಮೂದಿಸಿರುವಂತೆ ಪುನರ್ ವ್ಯವಸ್ಥೆಗೊಳಿಸಿ ಮರುನಾಮಕರಣಗೊಳಿಸಲಾಗಿದೆ. ಈ ರೀತಿ ಸ್ಥಳಾಂತರಿಸಿ ಮರುನಾಮಕರಣಗೊಳಿಸಿದ ಕಛೇರಿಗಳಿಗೆ ಈ ಹಿಂದೆ ಜಾರಿ ವಿಭಾಗದಲ್ಲಿ ಸದರಿ ಕಛೇರಿಗಳಲ್ಲಿ ಮಂಜೂರಾಗಿದ್ದ ಹುದ್ದೆಗಳನ್ನು ಈ ರೀತಿ ಪುನರ್ ವ್ಯವಸ್ಥೆಗೊಳಿಸಿದ ಲೆಕ್ಕಪರಿಶೋಧನೆ ಮತ್ತು ವಸೂಲಾತಿ ಕಛೇರಿಗಳ ನಿರ್ವಹಣೆಗೆ ಸ್ಥಳಾಂತರಗೊಳಿಸಿ ನಿಯೋಜಿಸಲಾಗಿದೆ. ಈ ರೀತಿ ನಿಯೋಜಿಸಿರುವ ಅಧಿಕಾರಿ ಹಾಗೂ ಪೂರಕ ಸಿಬ್ಬಂದಿ ವರ್ಗಗಳ ಹುದ್ದೆಗಳಿಗೆ ಸಂಬಂಧಿಸಿದಂತೆ ವಿವರಗಳು ಕೋಷ್ಠಕ-2ರ ಅಂಕಣ (4) ರಿಂದ (8) ರವರೆಗೆ ನಮೂದಿಸಿ ನಿಯೋಜಿಸಲಾಗಿದೆ. ಮರುನಾಮಕರಣಗೊಂಡ ಕೆಲವು ಕಛೇರಿಗಳಲ್ಲಿ ಅವಶ್ಯಕತೆ ಇರುವ ಹುದ್ದೆಗಳನ್ನು ಹೆಚ್ಚುವರಿಯಾಗಿ ಲಭ್ಯವಿರುವ ಜಾರಿ ಹಾಗೂ ಆಡಳಿತ ಕಛೇರಿಗಳಿಂದ ಸ್ಥಳಾಂತರಿಸಲಾಗಿದ್ದು, ಈ ರೀತಿ ಸ್ಥಳಾಂತರಿಸಿದ ಹುದ್ದೆಗಳ ವಿವರಗಳು ಕೋಷ್ಠಕ-3 ರಲ್ಲಿಯ ಟಿಪ್ಪಣಿಯಲ್ಲಿ ನಮೂದಿಸಲಾಗಿದೆ.

**ಕೋಷ್ಠಕ-1**

| ಪ್ರಸ್ತುತ ಕಾರ್ಯನಿರ್ವಹಿಸುತ್ತಿರುವ ಕಛೇರಿಗಳ ಪದನಾಮ ಹಾಗೂ ಮಂಜೂರಾದ ಹುದ್ದೆಗಳ ವಿವರಗಳು | | | | | | | | | | | | |
|---|---|---|---|---|---|---|---|---|---|---|---|---|
| ಕ್ರ. ಸಂ. | ಪುನರ್ ವ್ಯವಸ್ಥೆಯ ಪೂರ್ವ ದಲ್ಲಿ ಇದ್ದ ಕಛೇರಿಗಳ ಪದನಾಮ | ವಾತೆ ಸಆ | ವಾ.ತೆ.ಅ. | ವಾ.ತೆ.ಪ. | ಶೀ.ಲಿ. | ಪ್ರ.ದ.ಸ. | ದ್ವಿ.ದ.ಸ. | ಬೆರಳಚ್ಚು ಗಾರರು | ಕರವಸೂ ಲಿಗಾರರು | ಡಿ ದರ್ಜೆ ನೌಕರರು | ವಾಹನ ಚಾಲಕರು | ಒಟ್ಟು |
| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
| 1 | ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, (ಜಾರಿ)-3, ಬಳ್ಳಾರಿ | 1 | 0 | 1 | 0 | 0 | 1 | 0 | 0 | 1 | 1 | 5 |

| 1 | 2 | 3 | 4 | 5 | 6 | 7 | 8 | 9 | 10 | 11 | 12 | 13 |
|---|---|---|---|---|---|---|---|---|---|---|---|---|
| 2 | ವಾಣಿಜ್ಯ ತೆರಿಗೆ ಅಧಿಕಾರಿ (ಜಾರಿ)–5, ಬಳ್ಳಾರಿ | 0 | 1 | 1 | 0 | 0 | 0 | 0 | 0 | 0 | 0 | 2 |
| 3 | ವಾಣಿಜ್ಯ ತೆರಿಗೆ ಅಧಿಕಾರಿ (ಜಾರಿ)–3, ಹೊಸಪೇಟೆ | 0 | 1 | 1 | 0 | 0 | 1 | 0 | 0 | 1 | 0 | 4 |
| 4 | ವಾಣಿಜ್ಯ ತೆರಿಗೆ ಅಧಿಕಾರಿ (ಜಾರಿ)–4, ಹೊಸಪೇಟೆ | 0 | 1 | 1 | 0 | 0 | 1 | 0 | 0 | 1 | 0 | 4 |
| 5 | ವಾಣಿಜ್ಯ ತೆರಿಗೆ ಅಧಿಕಾರಿ (ಜಾರಿ)–2, ಚಳ್ಳಕೆರೆ | 0 | 1 | 1 | 0 | 0 | 0 | 0 | 0 | 0 | 0 | 2 |
| | **ಒಟ್ಟು** | **1** | **4** | **5** | **0** | **0** | **3** | **0** | **0** | **3** | **1** | **17** |

**ಕೋಷ್ಟಕ–2**

| ಕಛೇರಿಗಳ ಪುನರ್ ವ್ಯವಸ್ಥೆ ಹಾಗೂ ಕಛೇರಿಗಳ ಮರು ನಾಮಕರಣದಿಂದ ಬದಲಾದ ಕಛೇರಿಗಳ ಪದನಾಮ ಹಾಗೂ ಸದರಿ ಕಛೇರಿಗಳಿಗೆ ನಿಯೋಜಿಸಿರುವ ಹುದ್ದೆಗಳ ವಿವರ | | | | | | | | | | | | | |
|---|---|---|---|---|---|---|---|---|---|---|---|---|---|
| ಕ್ರ. ಸಂ. | ಪುನರ್ ವ್ಯವಸ್ಥೆಯಿಂದ ಮರುನಾಮಕರಣಗೊಂಡ ಕಛೇರಿಯ ಪದನಾಮ | ಸಂಬಳ ಹಾಗೂ ಇತರೆ ಭತ್ಯೆಗಳ ಬಟಾವಡೆ ಮಾಡಲು ಅಧಿಕಾರಿ ಹೊಂದಿರುವ | ವಾತೆ ಸಆ | ವಾ.ತೆ ಅ. | ವಾ.ತೆ. ಪ. | ಪ್ರ.ದ. ಸ | ಶೀಘ್ರ ಲಿಪಿ ಗಾರರು | ದ್ವಿ.ದ.ಸ. | ಬೆರಳಚ್ಚು ಗಾರರು | ಕರ ವಸೂಲಿಗಾರರು | ಡಿ ದರ್ಜೆ ನೌಕರರು | ವಾಹನ ಚಾಲಕರು | ಒಟ್ಟು ಹುದ್ದೆಗಳು |
| **1** | **2** | **3** | **4** | **5** | **6** | **7** | **8** | **9** | **10** | **11** | **12** | **13** | **14** |
| 1 | ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, (ಲೆಕ್ಕ ಪರಿಶೋಧನೆ ಮತ್ತು ವಸೂಲಿ) ಬಳ್ಳಾರಿ | ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು (ಲೆಪ ಮತ್ತು ವ), ಬಳ್ಳಾರಿ | 1 | 0 | 1 | 1 | 1 | 1 | 0 | 1 | 1 | 1 | 8 |
| 2 | ವಾಣಿಜ್ಯ ತೆರಿಗೆ ಅಧಿಕಾರಿ, (ಲೆಕ್ಕ ಪರಿಶೋಧನೆ ಮತ್ತು ವಸೂಲಿ) ಬಳ್ಳಾರಿ | | 0 | 1 | 1 | 0 | 0 | 1 | 1 | | 1 | 0 | 5 |

<table>
<tr><th>1</th><th>2</th><th>3</th><th>4</th><th>5</th><th>6</th><th>7</th><th>8</th><th>9</th><th>10</th><th>11</th><th>12</th><th>13</th><th>14</th></tr>
<tr><td>3</td><td>ವಾಣಿಜ್ಯ ತೆರಿಗೆ ಅಧಿಕಾರಿ, (ಲೆಕ್ಕ ಪರಿಶೋಧನೆ ಮತ್ತು ವಸೂಲಿ)–1 ಹೊಸಪೇಟೆ</td><td rowspan="2">ವಾಣಿಜ್ಯ ತೆರಿಗೆ ಅಧಿಕಾರಿ, (ಲೆಪ ಮತ್ತು ವ)–1 ಹೊಸಪೇಟೆ</td><td>0</td><td>1</td><td>1</td><td>1</td><td>0</td><td>1</td><td rowspan="2">1</td><td rowspan="2">1</td><td>1</td><td>0</td><td>7</td></tr>
<tr><td>4</td><td>ವಾಣಿಜ್ಯ ತೆರಿಗೆ ಅಧಿಕಾರಿ, (ಲೆಕ್ಕ ಪರಿಶೋಧನೆ ಮತ್ತು ವಸೂಲಿ)–2 ಹೊಸಪೇಟೆ</td><td>0</td><td>1</td><td>1</td><td>–</td><td>0</td><td>1</td><td>1</td><td>0</td><td>4</td></tr>
<tr><td>5</td><td>ವಾಣಿಜ್ಯ ತೆರಿಗೆ ಅಧಿಕಾರಿ, (ಲೆಕ್ಕ ಪರಿಶೋಧನೆ ಮತ್ತು ವಸೂಲಿ) ಚಳ್ಳಕೆರೆ</td><td>ವಾಣಿಜ್ಯ ತೆರಿಗೆ ಅಧಿಕಾರಿ, (ಲೆಪ ಮತ್ತು ವ) ಚಳ್ಳಕೆರೆ</td><td>0</td><td>1</td><td>1</td><td>1</td><td>0</td><td>0</td><td>1</td><td>1</td><td>1</td><td>0</td><td>6</td></tr>
</table>

**ಕೋಷ್ಟಕ–3**

**ಕೊರತೆಯಿದ್ದ ಹುದ್ದೆಗಳನ್ನು ಸ್ಥಳಾಂತರಿಸಿರುವುದು**

| | |
|---|---|
| ಪ್ರ.ದ.ಸ. | 1. ಒಂದು ಹುದ್ದೆಯನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, ಎಲ್.ವಿ.ಓ. 495 ಬಳ್ಳಾರಿ ಈ ಕಛೇರಿಯಿಂದ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು (ಲೆ.ಪ.ಮತ್ತು ವ), ಬಳ್ಳಾರಿ ಈ ಕಛೇರಿಗೆ ಸ್ಥಳಾಂತರಿಸಲಾಗಿದೆ.<br>2. ಒಂದು ಹುದ್ದೆಯನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು ಎಲ್.ವಿ.ಓ. 500 ಹೊಸಪೇಟೆ ಈ ಕಛೇರಿಯಿಂದ ವಾಣಿಜ್ಯ ತೆರಿಗೆ ಅಧಿಕಾರಿ (ಲೆ.ಪ.ಮತ್ತು ವ)–1 ಹೊಸಪೇಟೆ ಈ ಕಛೇರಿಗೆ ಸ್ಥಳಾಂತರಿಸಲಾಗಿದೆ.<br>3. ಒಂದು ಹುದ್ದೆಯನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, ಎಲ್.ವಿ.ಓ. 485 ಚಳ್ಳಕೆರೆ ಈ ಕಛೇರಿಯಿಂದ ವಾಣಿಜ್ಯ ತೆರಿಗೆ ಅಧಿಕಾರಿ (ಲೆ.ಪ.ಮತ್ತು ವ) ಚಳ್ಳಕೆರೆ ಈ ಕಛೇರಿಗೆ ಸ್ಥಳಾಂತರಿಸಲಾಗಿದೆ. |
| ಶೀಘ್ರಲಿಪಿಗಾರರು | 1. ಒಂದು ಹುದ್ದೆಯನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, ಎಲ್.ವಿ.ಓ. 495 ಬಳ್ಳಾರಿ ಈ ಕಛೇರಿಯಿಂದ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು (ಲೆ.ಪ. ಮತ್ತು ವ), ಬಳ್ಳಾರಿ ಈ ಕಛೇರಿಗೆ ಸ್ಥಳಾಂತರಿಸಲಾಗಿದೆ. |
| ದ್ವಿತೀಯ ದರ್ಜೆ ಸಹಾಯಕರು | 1. ಒಂದು ಹುದ್ದೆಯನ್ನು ವಾಣಿಜ್ಯ ತೆರಿಗೆ ಉಪ ಆಯುಕ್ತರು, (ಲೆ.ಪ.ಮತ್ತು ವ), ಬಳ್ಳಾರಿ ಇವರ ಕಛೇರಿಯಿಂದ ವಾಣಿಜ್ಯ ತೆರಿಗೆ ಅಧಿಕಾರಿ, (ಲೆ.ಪ. ಮತ್ತು ವ) ಬಳ್ಳಾರಿ ಈ ಕಛೇರಿಗೆ ಸ್ಥಳಾಂತರಿಸಲಾಗಿದೆ. |

| | |
|---|---|
| ಬೆರಳಚ್ಚುಗಾರರು | 1. ಒಂದು ಹುದ್ದೆಯನ್ನು ವಾಣಿಜ್ಯ ತೆರಿಗೆ ಜಂಟಿ ಆಯುಕ್ತರ ಕಛೇರಿ, (ಜಾರಿ) (ಕೇಂದ್ರ ವಲಯ) ಬಳ್ಳಾರಿ ಈ ಕಛೇರಿಯಿಂದ ವಾಣಿಜ್ಯ ತೆರಿಗೆ ಅಧಿಕಾರಿ, (ಲೆ.ಪ. ಮತ್ತು ವ) ಬಳ್ಳಾರಿ ಈ ಕಛೇರಿಗೆ ಸ್ಥಳಾಂತರಿಸಲಾಗಿದೆ.<br>2. ಒಂದು ಹುದ್ದೆಯನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, ಎಲ್.ವಿ.ಓ. 500 ಹೊಸಪೇಟೆ ಈ ಕಛೇರಿಯಿಂದ ವಾಣಿಜ್ಯ ತೆರಿಗೆ ಅಧಿಕಾರಿಗಳು, (ಲೆ.ಪ. ಮತ್ತು ವ)–2 ಹೊಸಪೇಟೆ ಈ ಕಛೇರಿಗೆ ಸ್ಥಳಾಂತರಿಸಲಾಗಿದೆ.<br>3. ಒಂದು ಹುದ್ದೆಯನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, ಎಲ್.ವಿ.ಓ. 485, ಚಳ್ಳಕೆರೆ ಈ ಕಛೇರಿಯಿಂದ ವಾಣಿಜ್ಯ ತೆರಿಗೆ ಅಧಿಕಾರಿ, (ಲೆ.ಪ. ಮತ್ತು ವ) ಚಳ್ಳಕೆರೆ ಈ ಕಛೇರಿಗೆ ಸ್ಥಳಾಂತರಿಸಲಾಗಿದೆ. |
| ಕರವಸೂಲಿಗಾರರು | 1. ಒಂದು ಹುದ್ದೆಯನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, ಎಲ್.ವಿ.ಓ. 495 ಬಳ್ಳಾರಿ ಈ ಕಛೇರಿಯಿಂದ ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, (ಲೆ.ಪ. ಮತ್ತು ವ) ಬಳ್ಳಾರಿ ಈ ಕಛೇರಿಗೆ ಸ್ಥಳಾಂತರಿಸಲಾಗಿದೆ.<br>2. ಒಂದು ಹುದ್ದೆಯನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, ಎಲ್.ವಿ.ಓ. 500 ಹೊಸಪೇಟೆ ಈ ಕಛೇರಿಯಿಂದ ವಾಣಿಜ್ಯ ತೆರಿಗೆ ಅಧಿಕಾರಿ, (ಲೆ.ಪ. ಮತ್ತು ವ)–1 ಹೊಸಪೇಟೆ ಈ ಕಛೇರಿಗೆ ಸ್ಥಳಾಂತರಿಸಲಾಗಿದೆ.<br>3. ಒಂದು ಹುದ್ದೆಯನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, ಎಲ್.ವಿ.ಓ. 485, ಚಳ್ಳಕೆರೆ ಈ ಕಛೇರಿಯಿಂದ ವಾಣಿಜ್ಯ ತೆರಿಗೆ ಅಧಿಕಾರಿ, (ಲೆ.ಪ. ಮತ್ತು ವ) ಚಳ್ಳಕೆರೆ ಈ ಕಛೇರಿಗೆ ಸ್ಥಳಾಂತರಿಸಲಾಗಿದೆ. |
| ಗ್ರೂಪ್ "ಡಿ" ನೌಕರರು | 1. ಒಂದು ಹುದ್ದೆಯನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರು, ಎಲ್.ವಿ.ಓ. 495, ಬಳ್ಳಾರಿ ಈ ಕಛೇರಿಯಿಂದ ವಾಣಿಜ್ಯ ತೆರಿಗೆ ಅಧಿಕಾರಿ, (ಲೆ.ಪ. ಮತ್ತು ವ) ಬಳ್ಳಾರಿ ಈ ಕಛೇರಿಗೆ ಸ್ಥಳಾಂತರಿಸಲಾಗಿದೆ.<br>2. ಒಂದು ಹುದ್ದೆಯನ್ನು ವಾಣಿಜ್ಯ ತೆರಿಗೆ ಸಹಾಯಕ ಆಯುಕ್ತರ ಕಛೇರಿ, ಎಲ್.ವಿ.ಓ. 485, ಚಳ್ಳಕೆರೆ ಈ ಕಛೇರಿಯಿಂದ ವಾಣಿಜ್ಯ ತೆರಿಗೆ ಅಧಿಕಾರಿ, (ಲೆ.ಪ. ಮತ್ತು ವ) ಚಳ್ಳಕೆರೆ ಈ ಕಛೇರಿಗೆ ಸ್ಥಳಾಂತರಿಸಲಾಗಿದೆ. |

**ಘೋಷ್ವಾರೆ**

| ಕ್ರಮ ಸಂಖ್ಯೆ | ಹುದ್ದೆ | ಮರು ನಾಮಕರಣ ಪೂರ್ವದಲ್ಲಿ | ಮರು ನಾಮಕರಣ ನಂತರದಲ್ಲಿ | ಷರಾ |
|---|---|---|---|---|
| 1 | ವಾ.ತೆ.ಸ.ಆ. | 1 | 1 | ವಾ.ತೆ.ಸ.ಆ. (ಜಾರಿ)–3 ಬಳ್ಳಾರಿ ಈ ಕಛೇರಿಯನ್ನು ವಾ.ತೆ.ಸ.ಆ. (ಲೆ.ಪ. ಮತ್ತು ವ) ಕಛೇರಿ, ಬಳ್ಳಾರಿ ಎಂದು ಮರುನಾಮಕರಣಗೊಳಿಸಲಾಗಿದೆ. |
| 2 | ವಾ.ತೆ.ಅ. | 1 | 1 | ವಾ.ತೆ.ಅ. (ಜಾರಿ)–5 ಬಳ್ಳಾರಿ ಈ ಕಛೇರಿಯನ್ನು ವಾ.ತೆ.ಅ. (ಲೆ.ಪ. ಮತ್ತು ವ) ಕಛೇರಿ, ಬಳ್ಳಾರಿ ಎಂದು ಮರುನಾಮಕರಣಗೊಳಿಸಲಾಗಿದೆ. |
| 3 | ವಾ.ತೆ.ಅ. | 1 | 1 | ವಾ.ತೆ.ಅ. (ಜಾರಿ)–3 ಹೊಸಪೇಟೆ ಈ ಕಛೇರಿಯನ್ನು ವಾ.ತೆ.ಅ. (ಲೆ.ಪ. ಮತ್ತು ವ)–1 ಕಛೇರಿ, ಹೊಸಪೇಟೆ ಎಂದು ಮರುನಾಮಕರಣ ಗೊಳಿಸಲಾಗಿದೆ. |
| 4 | ವಾ.ತೆ.ಅ. | 1 | 1 | ವಾ.ತೆ.ಅ. (ಜಾರಿ)–4 ಹೊಸಪೇಟೆ ಈ ಕಛೇರಿಯನ್ನು ವಾ.ತೆ.ಅ. (ಲೆ.ಪ. ಮತ್ತು ವ)–2 ಕಛೇರಿ, ಹೊಸಪೇಟೆ ಎಂದು ಮರುನಾಮಕರಣ ಗೊಳಿಸಲಾಗಿದೆ. |
| 5 | ವಾ.ತೆ.ಅ. | 1 | 1 | ವಾ.ತೆ.ಅ. (ಜಾರಿ)–2 ಚಳ್ಳಕೆರೆ ಈ ಕಛೇರಿಯನ್ನು ವಾ.ತೆ.ಅ. (ಲೆ.ಪ. ಮತ್ತು ವ)–2 ಕಛೇರಿ, ಚಳ್ಳಕೆರೆ ಎಂದು ಮರುನಾಮಕರಣಗೊಳಿಸಲಾಗಿದೆ. |
| 6 | ವಾ.ತೆ.ಪ. | 5 | 5 | ಜಾರಿ ವಿಭಾಗದಲ್ಲಿ ಈ ಹಿಂದೆ ಕಾರ್ಯ ನಿರ್ವಹಿಸುತ್ತಿದ್ದ ಕಛೇರಿಗಳಿಂದ ಮರುನಾಮಕರಣ ಗೊಂಡ ಕಛೇರಿಗಳಿಗೆ ಸ್ಥಳಾಂತರಿಸಲಾಗಿದೆ. |
| 7 | ಪ್ರ.ದ.ಸ. | 0 | 3 | ಅಗತ್ಯವಿರುವ ಹುದ್ದೆಗಳನ್ನು ಕೋಷ್ಟಕ–3 ರಲ್ಲಿ ನಮೂದಿಸಿರುವ ಕಛೇರಿಗಳಿಂದ ಕೋಷ್ಟಕ–2 ರಲ್ಲಿ ನಮೂದಿಸಿರುವ ಮರುನಾಮಕರಣಗೊಂಡ ಕಛೇರಿ ಗಳಿಗೆ ಸ್ಥಳಾಂತರಿಸಲಾಗಿದೆ. |

| ಕ್ರಮ ಸಂಖ್ಯೆ | ಹುದ್ದೆ | ಮರು ನಾಮಕರಣ ಪೂರ್ವದಲ್ಲಿ | ಮರು ನಾಮಕರಣ ನಂತರದಲ್ಲಿ | ಷರಾ |
|---|---|---|---|---|
| 8 | ಶೀಘ್ರಲಿಪಿಗಾರರು | 0 | 1 | ಅಗತ್ಯವಿರುವ ಹುದ್ದೆಗಳನ್ನು ಕೋಷ್ಟಕ–3 ರಲ್ಲಿ ನಮೂದಿಸಿರುವ ಕಛೇರಿಗಳಿಂದ ಕೋಷ್ಟಕ–2 ರಲ್ಲಿ ನಮೂದಿಸಿರುವ ಮರುನಾಮಕರಣಗೊಂಡ ಕಛೇರಿ ಗಳಿಗೆ ಸ್ಥಳಾಂತರಿಸಲಾಗಿದೆ. |
| 9 | ದ್ವಿ.ದ.ಸ. | 3 | 4 | ಜಾರಿ, ವಿಭಾಗದಲ್ಲಿದ್ದ ಈ ಹಿಂದೆ ಕಾರ್ಯನಿರ್ವಹಿಸುತ್ತಿದ್ದ ಕಛೇರಿಗಳಿಂದ ಮರು ನಾಮಕರಣಗೊಂಡ ಕಛೇರಿಗಳಿಗೆ ಸ್ಥಳಾಂತರಿಸಲಾಗಿದೆ ಹಾಗೂ ಅಗತ್ಯವಿರುವ ಒಂದು ಹುದ್ದೆಯನ್ನು ಕೋಷ್ಟಕ–3ರಲ್ಲಿ ನಮೂದಿಸಿರುವ ಕಛೇರಿಗಳಿಂದ ಕೋಷ್ಟಕ–2ರಲ್ಲಿ ನಮೂದಿಸಿರುವ ಮರುನಾಮಕರಣ ಗೊಂಡ ಕಛೇರಿಗೆ ಸ್ಥಳಾಂತರಿಸಲಾಗಿದೆ. |
| 10 | ಬೆರಳಚ್ಚುಗಾರರು | 0 | 3 | ಅಗತ್ಯವಿರುವ ಹುದ್ದೆಗಳನ್ನು ಕೋಷ್ಟಕ–3 ರಲ್ಲಿ ನಮೂದಿಸಿರುವ ಕಛೇರಿಗಳಿಂದ ಕೋಷ್ಟಕ–2 ರಲ್ಲಿ ನಮೂದಿಸಿರುವ ಮರುನಾಮಕರಣಗೊಂಡ ಕಛೇರಿಗಳಿಗೆ ಸ್ಥಳಾಂತರಿಸಲಾಗಿದೆ. |
| 11 | ಕರವಸೂಲಿಗಾರರು | 0 | 3 | ಅಗತ್ಯವಿರುವ ಹುದ್ದೆಗಳನ್ನು ಕೋಷ್ಟಕ–3 ರಲ್ಲಿ ನಮೂದಿಸಿರುವ ಕಛೇರಿಗಳಿಂದ ಕೋಷ್ಟಕ–2 ರಲ್ಲಿ ನಮೂದಿಸಿರುವ ಮರುನಾಮಕರಣಗೊಂಡ ಕಛೇರಿಗಳಿಗೆ ಸ್ಥಳಾಂತರಿಸಲಾಗಿದೆ. |
| 12 | "ಡಿ" ದರ್ಜೆ ನೌಕರರು | 3 | 5 | ಜಾರಿ ವಿಭಾಗದಲ್ಲಿದ್ದ ಈ ಹಿಂದೆ ಕಾರ್ಯನಿರ್ವಹಿಸುತ್ತಿದ್ದ ಕಛೇರಿಗಳಿಂದ ಮರು ನಾಮಕರಣಗೊಂಡ ಕಛೇರಿಗಳಿಗೆ ಸ್ಥಳಾಂತರಿಸಲಾಗಿದೆ ಹಾಗೂ ಅಗತ್ಯವಿರುವ ಎರಡು ಹುದ್ದೆಗಳನ್ನು ಕೋಷ್ಟಕ–3 ರಲ್ಲಿ ನಮೂದಿಸಿರುವ ಕಛೇರಿಗಳಿಂದ ಕೋಷ್ಟಕ–2 ರಲ್ಲಿ ನಮೂದಿಸಿರುವ ಮರುನಾಮಕರಣ ಗೊಂಡ ಕಛೇರಿಗಳಿಗೆ ಸ್ಥಳಾಂತರಿಸಲಾಗಿದೆ. |
| 13 | ವಾಹನ ಚಾಲಕರು | 1 | 1 | ಜಾರಿ ವಿಭಾಗದಲ್ಲಿದ್ದ ಈ ಹಿಂದೆ ಕಾರ್ಯನಿರ್ವಹಿಸುತ್ತಿದ್ದ ಕಛೇರಿಯಿಂದ ಮರು ನಾಮಕರಣಗೊಂಡ ಕಛೇರಿಗಳಿಗೆ ಸ್ಥಳಾಂತರಿಸ ಲಾಗಿದೆ. |
| | **ಒಟ್ಟು** | **17** | **30** | – |

ಈ ರೀತಿ ಪುನರ್ ವ್ಯವಸ್ಥೆಯಿಂದ ಮರುನಾಮಕರಣಗೊಳಿಸಿರುವ ಕಛೇರಿಯಲ್ಲಿ ಕಾರ್ಯನಿರ್ವಹಿಸುತ್ತಿರುವ ಅಧಿಕಾರಿ ಹಾಗೂ ಸಿಬ್ಬಂದಿ ವರ್ಗದವರಿಗೆ ಸಂಬಳ ಹಾಗೂ ಇತರೆ ಭತ್ಯೆಗಳನ್ನು ಖಜಾನೆಯಿಂದ ಪಡೆದು ವಿತರಣೆ ಮಾಡುವ ಅಧಿಕಾರ ವ್ಯಾಪ್ತಿಯನ್ನು ಕೋಷ್ಟಕ–2ರ ಅಂಕಣ (3) ರಲ್ಲಿ ನಮೂದಿಸಿರುವ ಅಧಿಕಾರಿಗಳು ಹೊಂದಿರುತ್ತಾರೆ.

ಈ ವ್ಯವಸ್ಥೆಯು ತಕ್ಷಣದಿಂದ ಜಾರಿಗೆ ಬಂದಿದ್ದು, ಮುಂದಿನ ಆದೇಶದವರೆಗೆ ಜಾರಿಯಲ್ಲಿರುತ್ತದೆ.

**ಅಜಯ್ ಸೇಠ್,**
ವಾಣಿಜ್ಯ ತೆರಿಗೆಗಳ ಆಯುಕ್ತರು,
ಕರ್ನಾಟಕ, ಬೆಂಗಳೂರು.

**PR. 47**

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ನ್ಯಾಯಾಲಯ, ಅರಣ್ಯ ಸಂಚಾರಿ ದಳ, ಶಿವಮೊಗ್ಗ

**ಸಂಖ್ಯೆ : ಎ1.71ಎ.ಅಮೊ.13/08–09, ದಿನಾಂಕ : 18ನೇ ಡಿಸೆಂಬರ್ 2013.**

**ಉಪಸ್ಥಿತರು :** ಶ್ರೀ ಡಿ.ಎಲ್. ಗಣಪತಿ,
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಪಿರ್ಯಾದಿ :** ವನಪಾಲಕ, ಅರಣ್ಯ ಸಂಚಾರಿ ದಳ, ಶಿವಮೊಗ್ಗ, (ಪರವಾಗಿ, ಸಹಾಯಕ ಅಭಿಯೋಗ ನಿರ್ದೇಶಕರು, ಶಿವಮೊಗ್ಗ)

**ಅರ್ಜಿದಾರರು** ಎಸ್.ಕೆ. ಲಿಂಗರಾಜು, ಬಿನ್ ಕೆಂಚಪ್ಪ, 45 ವರ್ಷ, ಸ್ಟಾಂಪ್ ವೆಂಡರ್, ತುಂಗಾ ಮೇಲ್ದಂಡೆ ಕ್ವಾಟರ್ಸ್, ಸಾಗರ ರಸ್ತೆ, ಶಿವಮೊಗ್ಗ. (ಪರವಾಗಿ ಎಸ್. ಹರಿಪ್ರಸಾದ್, ವಕೀಲರು, ಶಿವಮೊಗ್ಗ).

ಪ್ರಸ್ತಾವನೆ :–

ದಿನಾಂಕ : 12–07–2008 ರಂದು ಒಂದು ಬಿಳಿ ಬಣ್ಣದ ಮಾರುತಿ ಒಮ್ನಿ ವಾಹನ ನೊಂದಣಿ ಸಂಖ್ಯೆ : ಕೆಎ 05 ಎಂ–7988 ರಲ್ಲಿ ಬೀಟೆ ತುಂಡುಗಳು ಒಟ್ಟು 04=0.262 ಎಂ3 ನ್ನು ಯಾವುದೇ ತರಹದ ರಹದಾರಿ ಇಲ್ಲದೇ ಸಿಂಹಧಾಮ–ಸೋಮಿನಕೊಪ್ಪ ರಸ್ತೆಯಲ್ಲಿ ಕೋಟೆಗಂಗೂರು ರೈಲ್ವೆ ಗೇಟ್ ಹತ್ತಿರ ಅಕ್ರಮವಾಗಿ ಸಾಗಿಸುತ್ತಿದ್ದಾಗ ವನಪಾಲಕರು, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಮತ್ತು ಸಿಬ್ಬಂದಿಯವರು ಪತ್ತೆ, ಹಚ್ಚಿ ವಾಹನ ಹಾಗೂ ಬೀಟೆ ತುಂಡುಗಳನ್ನು ಸರ್ಕಾರದ ಪರ ಅಮಾನತ್ತು ಪಡಿಸಿಕೊಂಡು ಪಂಚನಾಮೆ ಕ್ರಮ ಜರುಗಿಸಿ ವಾಹನ ಮತ್ತು ಬೀಟೆ ತುಂಡುಗಳ ಬಗ್ಗೆ ಅರಣ್ಯ ಮೊಕದ್ದಮೆ ಸಂಖ್ಯೆ : 13/08–09 ನ್ನು ದಾಖಲು ಮಾಡಿಕೊಂಡು, ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಆಸಾಮಿಗಳು ಪತ್ತೆಯಾಗಿರುವುದಿಲ್ಲವೆಂದು ತಿಳಿಸುತ್ತಾ, ಸಂಬಂಧಪಟ್ಟ ದಾಖಲಾತಿಗಳೊಂದಿಗೆ ವಾಹನ ಮತ್ತು ಬೀಟೆ ತುಂಡುಗಳನ್ನು 1963ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71–ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ವಲಯ ಅರಣ್ಯಾಧಿಕಾರಿಗಳು, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಇವರು ಈ ಪ್ರಾಧಿಕಾರಕ್ಕೆ ಹಾಜರ್ ಪಡಿಸಿರುತ್ತಾರೆ.

ಅನಂತರ ಈ ಪ್ರಕರಣದ ವಿಚಾರಣಾ ಹಂತದಲ್ಲಿ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನದ ಮಾಲೀಕರನ್ನು ತಿಳಿದುಕೊಳ್ಳುವ ಬಗ್ಗೆ ಪ್ರಾದೇಶಿಕ ಸಾರಿಗೆ ಅಧಿಕಾರಿಗಳವರಲ್ಲಿ ಪತ್ರ ವ್ಯವಹರಿಸಿದ್ದು, ಅಲ್ಲದೇ ಇದೇ ಸಮಯದಲ್ಲಿ ವಾಹನದ ಮೇಲೆ ಮಾಲಿಕತ್ವ ಹೊಂದಿದ ಇತರೆ ವ್ಯಕ್ತಿಗಳು ಯಾರಾದರು ಇದ್ದರೆ ಹಾಜರಾಗುವಂತೆ ಪ್ರಕಟಣೆಯನ್ನು ದಿನಾಂಕ : 11ನೇ ಡಿಸೆಂಬರ್ 2008 ರ ಭಾಗ–3 ಪುಟ ಸಂಖ್ಯೆ 4464ರ ಕರ್ನಾಟಕ ರಾಜ್ಯ ಪತ್ರದಲ್ಲಿಯೂ ಪ್ರಚಾರ ಪಡಿಸಿ ಪ್ರಕಟಿಸಲಾಗಿತ್ತು.

ಈ ಮಧ್ಯೆ ದಿನಾಂಕ : 05–08–2008 ರಂದು ಅರ್ಜಿದಾರರಾದ ಶ್ರೀ ಎಸ್.ಕೆ. ಲಿಂಗರಾಜು ಬಿನ್ ಕೆಂಚಪ್ಪ ಸಾಗರ ರಸ್ತೆ, ಶಿವಮೊಗ್ಗ ಇವರು ವಕೀಲರ ಮುಖಾಂತರ ಈ ಪ್ರಾಧಿಕಾರಕ್ಕೆ ಅರ್ಜಿ ಸಲ್ಲಿಸಿ, ಮಾರುತಿ ಒಮ್ನಿ ವಾಹನ ನೊಂದಣಿ ಸಂಖ್ಯೆ : ಕೆಎ 05 ಎಂ–7988 ರ ವಾಹನದ ಮಾಲೀಕನಾಗಿದ್ದು, ಸ್ಟಾಂಪ್ ವೆಂಡರ್ ವೃತ್ತಿಯನ್ನು ಮಾಡುತ್ತಿದ್ದೇನೆ. ಹಾಗೂ ಸದರಿ ವಾಹನವನ್ನು ಸ್ವಂತ ಉಪಯೋಗದ ಸಲುವಾಗಿ ಖರೀದಿಸಿ ಮಕ್ಕಳನ್ನು ಶಾಲೆಗೆ ಕಳುಹಿಸಲು ಕರೆತರಲು ಉಪಯೋಗಿಸುತ್ತಿದ್ದೇನೆ. ಸದರಿ ವಾಹನಕ್ಕೆ ಶ್ರೀ ಎಸ್. ಸಂತೋಷ ಬಿನ್ ಶ್ರೀನಿವಾಸ, ಮೇದಾರ ಕೇರಿ, ಶಿವಮೊಗ್ಗ ಎಂಬುವರನ್ನು ಚಾಲಕನಾಗಿ ನೇಮಿಸಿರುತ್ತೇನೆ. ಆತನು ನಂಬಿಕೆ ಮತ್ತು ಪ್ರಾಮಾಣಿಕನಾಗಿರುತ್ತಾನೆ. ಹಾಗೂ ಚಾಲಕನಿಗೆ ಯಾವುದೇ ಕಳ್ಳ ವ್ಯಾಪಾರದ ವಸ್ತುಗಳನ್ನು ಸಾಗಿಸಬಾರದಾಗಿ ತಿಳಿಸಿರುತ್ತೇನೆ. ವಾಹನವನ್ನು ಚಾಲಕನು ಪ್ರತಿ ದಿನ ಬೆಳಿಗ್ಗೆ ಅರ್ಜಿದಾರರ ಮನೆಯಿಂದ 8.00 ಗಂಟೆಗೆ ತೆಗೆದುಕೊಂಡು ಸಂಜೆ ಶಾಲೆಯ ಟ್ರಿಪ್ ಮುಗಿದ ತಕ್ಷಣ 6–30ರ ವೇಳಗೆ ಅರ್ಜಿದಾರರ ಮನೆಯ ಹತ್ತಿರ ನಿಲ್ಲಿಸುತ್ತಿದ್ದೆ. ಆದರೆ, ದಿನಾಂಕ : 11–07–2008 ರಂದು ವಾಹನ ಚಾಲಕರು ಅರ್ಜಿದಾರರ ಬಳಿ ತಮ್ಮ ಸಂಬಂಧಿಕರ ಮನೆಯವರ ನಿಶ್ಚಿತಾರ್ಥದ ಕಾರ್ಯಕ್ರಮವು ಸಾಗರದಲ್ಲಿ ದಿನಾಂಕ : 12–07–2008ರಂದು ಇರುವುದರಿಂದ ಮನೆಯವರನ್ನು ಕರೆದುಕೊಂಡು ಹೋಗಲು ವಾಹನವನ್ನು ಕೊಡಿ ಎಂಬುದಾಗಿ ಅರ್ಜಿದಾರರಿಗೆ ಕೇಳಿ ವಾಹನವನ್ನು ಪಡೆದುಕೊಂಡು ಹೋಗಿರುತ್ತಾನೆ. ಆದರೆ, ದಿನಾಂಕ : 13–07–2008 ರವರೆಗೆ ಚಾಲಕರು ಅರ್ಜಿದಾರರನ್ನು ಸಂಪರ್ಕಿಸಿರುವುದಿಲ್ಲ ಆದರೆ, ಅರ್ಜಿದಾರರು ಸಂಚಾರಿ ದೂರವಾಣಿ (ಮೊಬೈಲ್) ಮುಖಾಂತರ ಚಾಲಕನನ್ನು ಸಂಪರ್ಕಿಸಿದಾಗ ಮೊಬೈಲ್ ಸ್ವಿಚ್ ಆಫ್ ಆಗಿರುವುದಾಗಿ ತಿಳಿಸಿರುತ್ತಾರೆ. ಅನಂತರ ಅರ್ಜಿದಾರರು ಎಲ್ಲಾ ಕಡೆ ವಾಹನವನ್ನು ಹುಡುಕಲಾರಂಭಿಸಿದರು, ಎರಡು ದಿನದ ನಂತರ ವಾಹನವನ್ನು ಅರಣ್ಯ ಇಲಾಖೆಯವರು ಸೀಜ್ ಮಾಡಿರುವುದು ತಿಳಿದು ಬಂದಿತು, ವಾಹನವನ್ನು ಮಕ್ಕಳನ್ನು ಶಾಲೆಗೆ ಕರೆದುಕೊಂಡು ಹೋಗಲು ತೊಂದರೆಯಾದ್ದರಿಂದ ವಾಹನದ ಅತ್ಯಾವಶ್ಯಕತೆ ಇರುತ್ತದೆ. ವಾಹನವನ್ನು ಕಛೇರಿ ಬಯಲಿನಲ್ಲಿಟ್ಟಿರುವುದರಿಂದ ಬಿಸಿಲು ಮಳೆಗೆ ಸಿಕ್ಕಿ ತುಕ್ಕು ಹಿಡಿದು ಹಾಳಾಗುವ ಸಾಧ್ಯತೆಯಿರುತ್ತದೆ. ಆದ್ದರಿಂದ ಸೂಕ್ತ ಷರತ್ತನ್ನು ವಿಧಿಸಿ ವಾಹನವನ್ನು ಮಧ್ಯಂತರ ಬಿಡುಗಡೆ ಮಾಡಬೇಕಾಗಿ ಕೋರಿರುತ್ತಾರೆ.

ದಿನಾಂಕ : 08–08–2008 ರಂದು ಸಹಾಯಕ ಅಭಿಯೋಗ ನಿರ್ದೇಶಕರು, ಶಿವಮೊಗ್ಗ ಇವರು ಅರ್ಜಿದಾರರು ತಾತ್ಕಾಲಿಕ ಸುಪರ್ದಿಗೆ ಬಿಟ್ಟುಕೊಡಲು ಕೇಳಿದ ವಾಹನದ ಬಗ್ಗೆ ಆಕ್ಷೇಪಣೆ ಸಲ್ಲಿಸಿರುತ್ತಾರೆ ಸದರಿ ಆಕ್ಷೇಪಣೆಯಲ್ಲಿ, ದಿನಾಂಕ : 12–07–2008 ರಂದು ಅಕ್ರಮವಾಗಿ ಬೀಟೆ ಸೈಜುಗಳನ್ನು ಸಾಗಾಣಿಕೆಯಲ್ಲಿ ವಾಹನ ನೋಂದಣಿ ಸಂಖ್ಯೆ : ಕೆಎ–05–ಎಂ–7988 ರಲ್ಲಿ ನಿರತವಾಗಿರುವಾಗ ಫಿರ್ಯಾದಿಯವರು ಸರ್ಕಾರದ ಪರ ಅಮಾನತ್ತು ಪಡಿಸಿರುವುದು, ಮಹಜರ್, ಪ್ರಥಮ ವರ್ತಮಾನ ವರದಿ ಹಾಗೂ ಅಮಾನತ್ತು ವರದಿಗಳ ದಾಖಲಾತಿಯಿಂದ ತಿಳಿದು ಬಂದಿರುತ್ತದೆ. ಹಾಗೂ ಅರ್ಜಿದಾರರಿಗೆ ತಿಳಿದೇ ಈ ಕೃತ್ಯ ವೆಸಗಿದೆ. ಅರ್ಜಿದಾರರು ಈ ಕೃತ್ಯವಾಗದಂತೆ ಯಾವುದೇ ಮುನ್ನಚ್ಚೆರಿಕೆ ಕ್ರಮಗಳನ್ನು ತೆಗೆದುಕೊಂಡಿರುವುದಿಲ್ಲ. ವಾಹನವನ್ನು ಮಧ್ಯಂತರ ಬಿಡುಗಡೆ ಮಾಡಿದ್ದಲ್ಲಿ ಪುನಃ ಇಂತಹ ಕೃತ್ಯಕ್ಕೆ ಉಪಯೋಗಿಸುವ ಸಾಧ್ಯತೆ ಇರುತ್ತದೆ. ಹಾಗೂ ವಿಚಾರಣೆಗೆ ತೊಂದರೆ ಉಂಟಾಗುತ್ತದೆ ಹಾಗೂ ವಾಹನವನ್ನು ಗುರುತು ಸಿಗದ ಹಾಗೆ ಬದಲಾಯಿಸುವ ಹಾಗೂ ಪರಬಾರೆ ಮಾಡುವ ಸಾಧ್ಯತೆ ಇರುತ್ತದೆ. ಆದಾಗ್ಯೂ ಮಧ್ಯಂತರ ಬಿಡುಗಡೆ ಮಾಡಬೇಕಾದಲ್ಲಿ ಸೂಕ್ತ ಬ್ಯಾಂಕ್ ಗ್ಯಾರಂಟಿಯನ್ನು ಪಡೆದು ಬಿಡುಗಡೆ ಮಾಡಬಹುದಾಗಿರುತ್ತದೆ ಎಂಬುದಾಗಿ ತಿಳಿಸಿರುತ್ತಾರೆ.

ಅನಂತರ ಪ್ರಕರಣದ ದಾಖಲಾತಿಗಳನ್ನು ಪರಿಶೀಲಿಸಿ, ಹಿಂದಿನ ಅಧಿಕಾರಿಗಳು ವಾಹನ ಮಾಲೀಕರು, ವಾಹನವನ್ನು ಮಧ್ಯಂತರ ಬಿಡುಗಡೆ ಕೋರಿ ದಿನಾಂಕ : 05–08–2008 ರಂದು ಕೇಳಿದ ಅರ್ಜಿಯನ್ನು ತಿರಸ್ಕರಿಸಿ ದಿನಾಂಕ : 29–08–2008 ರಂದು ಆದೇಶ ಹೊರಡಿಸಿರುತ್ತಾರೆ. ಸದರಿ ಆದೇಶದ ವಿರುದ್ಧ ವಾಹನ ಮಾಲೀಕರು ಶಿವಮೊಗ್ಗ ಸೆಶೆನ್ಸ್ ನ್ಯಾಯಾಧೀಶರು, ಒಂದನೇ ಶೀಘ್ರ ನ್ಯಾಯಾಲಯ, ಶಿವಮೊಗ್ಗಕ್ಕೆ ಮೇಲ್ಮನವಿ ಸಲ್ಲಿಸಿದ್ದು, ಅದು ಕ್ರಿಮಿನಲ್ ಮಿಎಸ್ ಅಫೀಲ್ ಸಂಖ್ಯೆ : 17/2008 ಆಗಿರುತ್ತದೆ. ಮಾನ್ಯ ನ್ಯಾಯಾಲಯವು ಪ್ರಕರಣದ ದಾಖಲಾತಿಗಳನ್ನು ಪರಿಶೀಲಿಸಿ ವಾಹನ ಮಾಲೀಕರು ರೂ. 2,00,000–00ಕ್ಕೆ ಬ್ಯಾಂಕ್ ಗ್ಯಾರಂಟಿಯನ್ನು ಮತ್ತು ಜಾಮೀನನ್ನು ನೀಡುವಂತೆ ನಿಬಂಧನೆಗೊಳಪಟ್ಟು ವಾಹನವನ್ನು ಮಧ್ಯಂತರ ಬಿಡುಗಡೆ ಮಾಡುವಂತೆ ದಿನಾಂಕ : 09–12–2008 ರಂದು ಆದೇಶ ಹೊರಡಿಸಿರುತ್ತಾರೆ. ಸದರಿ ಆದೇಶದನ್ವಯ ಅರ್ಜಿದಾರರ ಪರ ವಕೀಲರಿಗೆ ಬ್ಯಾಂಕ್ ಗ್ಯಾರಂಟಿಯನ್ನು ನೀಡಿ ವಾಹನವನ್ನು ಮಧ್ಯಂತರ ಸುಪರ್ದು ಪಡೆಯುವಂತೆ ತಿಳಿಸಲಾಗಿತ್ತು. ಆದರೆ ಅರ್ಜಿದಾರರ ಪರ ವಕೀಲರು ವಾಹನವನ್ನು ಮಧ್ಯಂತರವಾಗಿ ಪಡೆದಿರುವುದಿಲ್ಲ.

ಸದರಿ ಪ್ರಕರಣವನ್ನು ಅಂತಿಮ ತೀರ್ಮಾನಗೊಳಿಸುವ ಸಲುವಾಗಿ ಪ್ರಕರಣದ ಕುರಿತು ಈ ಪ್ರಾಧಿಕಾರದಲ್ಲಿ ದಿನಾಂಕ : 31–07–2013, 21–08–2013, 25–09–2013 ಮತ್ತು 23–10–2013 ರಂದು ವಿಚಾರಣೆ ಇಟ್ಟುಕೊಂಡಿರುವುದಾಗಿ ವಾಹನ ಮಾಲೀಕರಿಗೆ ದಾಖಲಾತಿ ಅಂಚೆ ಸ್ವೀಕೃತಿ ಬಾಕಿಯೊಂದಿಗೆ ತಿಳಿಸಿದ್ದು, ಸದರಿ ಪತ್ರಗಳು ಜಾರಿಯಾಗದೇ ವಾಪಸ್ಸು ಬಂದಿರುತ್ತದೆ. ಹಾಗೇಯೇ ಅರ್ಜಿದಾರರ ಪರ ವಕೀಲರಿಗೂ ತಿಳಿಸಿದ್ದು, ವಕೀಲರು ವಿಚಾರಣೆಗೆ ಹಾಜರಾಗುತ್ತಿಲ್ಲ. ಪ್ರತಿಯಾಗಿ ವಾಹನದ ಮಾಲೀಕರು ಪ್ರಕರಣಕ್ಕೆ ಸ್ಪಂದಿಸದ ಕಾರಣ ಮುಂದಿನ ಕ್ರಮ ಕೈಗೊಳ್ಳುವಂತೆ ತಿಳಿಸಿರುತ್ತಾರೆ.

ಈ ಮಧ್ಯೆ ಪ್ರಕರಣದ ವಿಚಾರಣೆ ಸಮಯದಲ್ಲಿ ಅಭಿಯೋಜನಾ ಪರ (ಪಿಡಬ್ಲ್ಯೂ–1) ಒಂದು ಸಾಕ್ಷಿಯನ್ನು ವಿಚಾರಿಸಿಕೊಂಡಿದ್ದು, ಸಾಕ್ಷಿದಾರರಾದ ಶ್ರೀ ಕೆ. ದಿಲ್ಲಪ್ಪ, ನಿವೃತ್ತ ವನಪಾಲಕ ಇವರು ತಮ್ಮ ಸಾಕ್ಷಿಯಲ್ಲಿ ತಾನು ಜೂನ್–2006 ರಿಂದ ಜೂನ್ 2012 ರವರೆಗೆ ವನಪಾಲಕನಾಗಿ ಅರಣ್ಯ ಸಂಚಾರಿ ದಳದಲ್ಲಿ ಕರ್ತವ್ಯ ನಿರ್ವಹಿಸಿದ್ದೆ. ದಿನಾಂಕ : 12–07–2008 ರಂದು ಅಕ್ರಮ ಬೀಟೆ ತುಂಡುಗಳ ಕಳ್ಳ ಸಾಗಾಣಿಕೆ ಬಗ್ಗೆ ಕಛೇರಿಗೆ ವರ್ತಮಾನ ಬಂತು, ಅದರಂತೆ ತಾನು ಅಧೀನ ಸಿಬ್ಬಂದಿಯೊಂದಿಗೆ ಇಲಾಖಾ ವಾಹನದಲ್ಲಿ ತ್ಯಾವರೆಕೊಪ್ಪದ ಸಮೀಪ ಕಾದು ಅಕ್ರಮ ಕಳ್ಳಸಾಗಾಣಿಕೆಯಲ್ಲಿ ತೊಡಗಿದ್ದ ಬಿಳಿ ಬಣ್ಣದ ಮಾರುತಿ ಒಮ್ನಿ ವಾಹನ ನೊಂದಣಿ ಸಂಖ್ಯೆ : ಕೆಎ 05 ಎಂ–7988 ಮತ್ತು ಅದರೊಳಗಿದ್ದ ಅಕ್ರಮವಾದ ಬೀಟೆ ತುಂಡುಗಳನ್ನು ಸರ್ಕಾರದ ಪರ ವಶಪಡಿಸಿಕೊಂಡಿದ್ದು ನಿಜವೆಂದು ತಿಳಿರುತ್ತಾರೆ. ಹಾಗೂ ಕೃತ್ಯ ನಡೆದ ದಿನದಂದು ದಾಖಲಿಸಿದ ಪ್ರಥಮ ವರ್ತಮಾನ ವರದಿಯನ್ನು ನಿಶಾನೆ ಪಿ1

ಅದರಲ್ಲಿರುವ ಸಾಕ್ಷಿ ಸಹಿ ನಿಶಾನೆ–ಪಿ1(ಎ) ಎಂದು ಮಹಜರನ್ನು ನಿಶಾನೆ ಪಿ2 ಎಂದು ಅದರಲ್ಲಿರುವ ಸಾಕ್ಷಿ ಸಹಿಯನ್ನು ನಿಶಾನೆ–ಪಿ2(ಎ) ಎಂದು ಜಪ್ತು ವರದಿಯನ್ನು ನಿಶಾನೆ–ಪಿ3 ಎಂದು ಅದರಲ್ಲಿರುವ ಸಾಕ್ಷಿ ಸಹಿಯನ್ನು ನಿಶಾನೆ–ಪಿ3(ಎ) ಎಂದು ಗುರುತಿಸಲಾಯಿತು. ಮತ್ತು ಆ ದಿನ ಜಪ್ತು ಮಾಡಿದ ವಾಹನವನ್ನು ಎಂಒ–1 ಎಂದು ಮತ್ತು 04 ಬೀಟೆ ತುಂಡುಗಳನ್ನು ಒಟ್ಟು ಎಂಒ–2 ಎಂದು ಗುರುತಿಸಲಾಯಿತು ಎಂಬುದಾಗಿ ಹೇಳಿಕೆ ನೀಡಿರುತ್ತಾರೆ.

ಅರ್ಜಿದಾರರ ಪರ ವಕೀಲರು ಗೈರು ಹಾಜರಾದ್ದರಿಂದ ಪಾಟಿ ಸವಾಲು ಇಲ್ಲ ಎಂದು ತೆಗೆದುಕೊಳ್ಳಲಾಯಿತು. ಅರ್ಜಿದಾರರಾಗಲೀ ಅವರ ಪರ ವಕೀಲರಾಗಲೀ ವಿಚಾರಣೆಗೆ ಹಾಜರಾಗದೇ ಇರುವುದರಿಂದ ಏಕ ಪಕ್ಷೀಯ ನಿರ್ಣಯ ಕೈಗೊಳ್ಳಲಾಯಿತು.

ಈ ಪ್ರಕರಣದಲ್ಲಿ ಅಭಿಯೋಜನಾ ಪರ ಸಾಕ್ಷಿದಾರರು ಪಿಡಬ್ಲ್ಯೂ–1 ಇವರು ನ್ಯಾಯಾಲಯಕ್ಕೆ ಹಾಜರಾಗಿ ನೀಡಿದ ಹೇಳಿಕೆಗೂ ಹಾಗೂ ಪಂಚನಾಮೆಯಲ್ಲಿರುವ ಅಂಶಗಳು ಒಂದಕ್ಕೊಂದು ತಾಳೆ ಹೊಂದಿದ್ದು, ಯಾವುದೇ ವ್ಯತಿರಿಕ್ತ ಹೇಳಿಕೆಗಳು ಬಂದಿರುವುದಿಲ್ಲ. ಅವರು ನುಡಿದ ಸಾಕ್ಷಿಯು ನಂಬುವಂತಾಗಿರುತ್ತದೆ. ಇದರಿಂದ ದಿನಾಂಕ : 12–07–2008 ರಂದು ಮಾರುತಿ ಓಮಿನಿ ವಾಹನ ನೋಂದಣಿ ಸಂಖ್ಯೆ : ಕೆಎ–05–ಎಂ–7988 ವಾಹನದಲ್ಲಿ ಅಕ್ರಮವಾಗಿ ಬೀಟೆ ತುಂಡುಗಳ ಸಾಗಾಣಿಕೆಯಲ್ಲಿ ನಿರತವಾಗಿರುವುದು ದೃಢಪಡುತ್ತದೆ.

ಅರ್ಜಿದಾರರ ಪರ ವಕೀಲರು ಹಾಗೂ ಅರ್ಜಿದಾರರಿಗೆ ಸಾಕಷ್ಟು ಕಾಲಾವಕಾಶವನ್ನು ನೀಡಿದಾಗ್ಯೂ ಕೂಡ ಮೇಲ್ಕಂಡ ಯಾವುದೇ ದಿವಸ ವಿಚಾರಣೆಗೆ ಹಾಜರಾಗಿ ಸಹಕರಿಸಿರುವುದಿಲ್ಲ ಇದರಿಂದ ಪ್ರಕರಣದ ಬಗ್ಗೆ ಅರ್ಜಿದಾರರಿಗೆ ಯಾವುದೇ ಆಸಕ್ತಿಯು ಇಲ್ಲವೆಂದು ಸ್ಪಷ್ಟವಾಗುತ್ತದೆ. ಅರಣ್ಯ ಕಾಯ್ದೆ ಸೆಕ್ಷನ್ 71–ಎ ಪ್ರಕರಣದಲ್ಲಿ ಯಾವುದೇ ವಾಹನವು ಅಕ್ರಮ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದೆ ಎಂದು ಮೇಲ್ನೋಟಕ್ಕೆ ಅಭಿಯೋಜನೆ ಸಿದ್ದಪಡಿಸಿದ ಮೇಲೆ ವಾಹನ ಮಾಲೀಕರು ತನ್ನ ತಿಳುವಳಿಕೆ ಇಲ್ಲದೇ ಅಥವಾ ತನ್ನ ಕೈ ಮೀರಿ ತಾನು ಎಲ್ಲಾ ಕಾಳಜಿ ವಹಿಸಿದ ನಂತರವೂ ಇಂತಹ ಅಪರಾಧದಲ್ಲಿ ಸಿಕ್ಕಿಹಾಕಿಕೊಂಡಿದೆ ಎಂದು ನಿಸ್ಸಂಶಯವಾಗಿ ಸಾಬೀತು ಪಡಿಸುವ ಸಂಪೂರ್ಣ ಬಾರ ಮಾಲೀಕರ ಮೇಲಿದ್ದು, ಮಾಲೀಕರಾಗಲೀ ಅಥವಾ ಸ್ವಾಧೀನ ಹೊಂದಿದವರಾಗಲೀ ವಾಹನವನ್ನು ಅಕ್ರಮ ಚಟುವಟಿಕೆಗಳಿಗೆ ತಮ್ಮ ತಿಳುವಳಿಕೆ ಬಾರದೇ ಉಪಯೋಗಿಸಲ್ಪಟ್ಟಿದೆ ಮತ್ತು ಈ ಅಕ್ರಮ ಚಟುವಟಿಕೆಗೆ ವಾಹನವನ್ನು ಉಪಯೋಗಿಸದಂತೆ ಅವಶ್ಯವಿರುವ ಎಲ್ಲಾ ಮುನ್ನೆಚ್ಚರಿಕೆಯನ್ನು ತೆಗೆದುಕೊಂಡಿದ್ದಾರೆಂದು ಸಾಕ್ಷ್ಯಾಧಾರದೊಂದಿಗೆ ಸಾಬೀತು ಪಡಿಸಬೇಕಾಗಿದ್ದು, ವಾಹನ ಮಾಲೀಕರು ಈ ನಿಟ್ಟಿನಲ್ಲಿ ಸಂಪೂರ್ಣ ವಿಫಲರಾಗಿರುತ್ತಾರೆ.

ಈ ಸಂಬಂಧ ಸಹಾಯಕ ಅಭಿಯೋಗ ನಿರ್ದೇಶಕರು ತಮ್ಮ ಅಭಿಪ್ರಾಯವನ್ನು ಮಂಡಿಸುತ್ತಾ, ಈ ಪ್ರಾಧಿಕಾರದಿಂದ ಈಗಾಗಲೇ ಹಲವಾರು ಭಾರಿ ಕಾಲಾವಕಾಶವನ್ನು ನೀಡಲಾಗಿದ್ದರು ಸಹ ವಾಹನದ ಮಾಲೀಕರಾಗಲಿ ಅವರ ಪರ ವಕಾಲತ್ತು ಸಲ್ಲಿಸಿರುವ ವಕೀಲರಾಗಲೀ ಪ್ರಕರಣದ ವಿಚಾರಣೆಗೆ ಹಾಜರಾಗುತ್ತಿಲ್ಲವಾದ್ದರಿಂದ, ಕಾನೂನಿನ್ವಯ ಪ್ರಾಧಿಕಾರವು ಮುಂದಿನ ಕ್ರಮಕ್ಕೆಗೊಳ್ಳಬಹುದೆಂದು ಮತ್ತು ಏಕಪಕ್ಷೀಯ ನಿರ್ಣಯ ಕೈಗೊಂಡು ಪ್ರಕರಣವನ್ನು ಮುಕ್ತಾಯಗೊಳಿಸುವಂತೆ ತಮ್ಮ ವಾದವನ್ನು ಮಂಡಿಸಿರುತ್ತಾರೆ.

ಅಲ್ಲದೇ, ಪ್ರಕರಣವು 2008 ರಲ್ಲಿ ದಾಖಲಾಗಿದ್ದರಿಂದ, ಈಗಾಗಲೇ 05 ವರ್ಷ ಗತಿಸಿದ್ದು, ಇನ್ನು ಮುಂದುವರೆಸಿದರೆ ಅರ್ಥಹೀನ ಹಾಗೂ ಅನಾವಶ್ಯಕ ಕಾಲ ಹರಣವೆಂದು ತೀರ್ಮಾನಿಸಿಕೊಂಡು ಅಭಿಯೋಜನಾ ಪರ ಸಾಕ್ಷ್ಯಾಧಾರವನ್ನು ಗಣನೆಗೆ ತೆಗೆದುಕೊಂಡು ದಿನಾಂಕ : 12–07–2008ರಂದು ಸಂಖ್ಯೆ ಕೆಎ–05–ಎಂ–7988 ವಾಹನದಲ್ಲಿ ಬೀಟೆ ತುಂಡುಗಳನ್ನು ಕಾನೂನು ಬಾಹಿರವಾಗಿ ಸಾಗಾಣಿಕೆ ಮಾಡಿರುವುದು ಸಂಬಂಧಪಟ್ಟ ದಾಖಲಾತಿಯಿಂದ ದೃಢಪಟ್ಟಿರುವುದರಿಂದ ಸದರಿ ವಾಹನವನ್ನು ಮುಟ್ಟುಗೋಲು ಹಾಕಿಕೊಳ್ಳುವುದು ಸಮಂಜಸವೆಂದು ಕಂಡು ಬಂದಿರುವುದಿರಿಂದ ಈ ಆದೇಶ.

**ಆದೇಶ**

ಮೇಲ್ಕಂಡ ವಿದ್ಯಾಮಾನಗಳ ಅನುಸಾರವಾಗಿ ಶ್ರೀ ಡಿ.ಎಲ್. ಗಣಪತಿ ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ಆದ ನಾನು, ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71–ಎ ರಂತೆ ಪ್ರದತ್ತವಾದ ಅಧಿಕಾರದಂತೆ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಮಾರುತಿ ಓಮಿನಿ ಸಂಖ್ಯೆ : ಕೆಎ–05–ಎಂ–7988 ಇಂಜಿನ್ ಸಂಖ್ಯೆ : ಎಫ್ 8ಬಿಐಎನ್ 1033912 ಚಾಸ್ಸಿ ಸಂಖ್ಯೆ : ಎಸ್‌ಟಿ 91–ಐಎನ್ 983695 ಮತ್ತು ಬೀಟೆ ತುಂಡುಗಳು 04=0.262 ಎಂ3 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಾಹನ ಮತ್ತು ಅದರ ಬಿಡಿ ಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರ ರೀತಿಯಲ್ಲಿ ವಿಲೇವಾರಿ ಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಬೀಟೆ ತುಂಡುಗಳು ಎಲ್ಲಾ ಋಣಭಾರದಿಂದ ವಿಮುಕ್ತವಾಗಿರುತ್ತದೆ.

ಈ ಆದೇಶವು ಈದಿನ ಅಂದರೆ ದಿನಾಂಕ : 18–12–2013 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸದೊಳಗೆ ವಾಹನ ಬಾದ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆ ತರದೇ ಇದ್ದರೆ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

**ಅನುಬಂಧ**

**ಫಿರ್ಯಾದಿದಾರರ ಪರ ಸಾಕ್ಷಿಗಳ ವಿಚಾರಣೆ**

1. ಶ್ರೀ ಕೆ. ದಿಲ್ಯಪ್ಪ, ನಿವೃತ್ತ ವನಪಾಲಕ, ಗೋಪಾಳ, ಶಿವಮೊಗ್ಗ.–ಪಿ.ಡಬ್ಲ್ಯೂ–1

**ಫಿರ್ಯಾದಿದಾರರ ಪರ ದಾಖಲಾತಿಗಳ ಪರಿಶೀಲನೆ :**

1. ಪ್ರಥಮ ವರ್ತಮಾನ ವರದಿ–ನಿಶಾನೆ–1.
2. ಸ್ಥಳ ಮಹಜರ್–ನಿಶಾನೆ–2
3. ಅಮಾನತ್ತು ವರದಿ–ನಿಶಾನೆ–3
4. ಕೆಎ–05–ಎಂ–7988 ಮಾರುತಿ ಒಮಿನಿ ವಾಹನ–ಎಂಒ–1
5. ಬೀಟೆ ತುಂಡು 04=0.262 ಎಂ3–ಎಂಒ–2

**ಅರ್ಜಿದಾರರ ಪರ ಸಾಕ್ಷಿಯ ವಿಚಾರಣೆ ಮತ್ತು ದಾಖಲಾತಿಗಳ ಪರಿಶೀಲನೆ :**

ಯಾವುದು ಇರುವುದಿಲ್ಲ

**ಡಿ.ಎಲ್. ಗಣಪತಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ.

P.R. 82

## Hydro Control Private Limited

## Registered Office: 49/B, 2nd Phase, 3rd Main Peenya Industrial Area, Bangalore-58, Karnataka.

Notice is hereby given that, pursuant to section 485 of the Companies Act 1956, the Company in terms of section 484 (1) (B) of the Companies Act, 1956, passed a Special Resolution at the Extra Ordinary General Meeting held on 14/03/2014, to wind up the Company by members voluntary winding up.

That the Company has appointed Mr. Saji P. John, Advocate, Bangalore as Liquidator of the Company for the purpose of such winding up as per the provisions of the Companies Act, 1956.

**SAJI P JOHN**
LIQUIDATOR

## FORM NO. 151
## (See Rule 315)
## Member's Voluntary winding-up
## Notice of appointment of liquidator pursuant to Section 516

| | |
|---|---|
| **Name of the company:** | Hydro Control Private Limited |
| **Nature of business:** | 1. To commence and carry on in Mysore state and/or in any other states in India and/or elsewhere including territories outside India Hydraulic and/or Power pack based industries;<br>2. To carry on the business of manufacturers, importers, exporters, assemblers of, hirers, repairers, cleaners, stores, and dealers in valves hydrostatic Controls and drives, oil Hydraulic elements and power packs |
| **Address of Registered Office:** | 49/B, 2nd Phase, 3rd Main Peenya Industrial Area, Bangalore-58, Karnataka |
| **Name and address of the Liquidator:** | Mr.Saji P. John, Advocate,<br>No.# 463, 13th Cross, 10th Main, Wilson Garden, Bangalore-027 |
| **Date of Appointment:** | 14th March, 2014. |
| **By whom appointed:** | The Shareholders of the Company by Special Resolution dated: 14/03/2014. |

**PD.25** **SAJI P JOHN**
**SC.5** LIQUIDATOR

## DEPARTMENT OF STAMPS AND REGISTRATION

### NOTIFICATION

### NO.CVC-SC/GBB/2013-14, 4510, BANGALORE DATED: 1ST JUNE, 2013

**SUB:** Revision of Market Value Guidelines of Immovable Properties in the jurisdiction of GUBBI Taluk in Tumkur District .

**REF:** No.CVC/24/2012-13, Bangalore Dated: 28/03/2013.

Whereas draft of the estimated Market value Guideline rates of immovable properties in the jurisdiction of Sub-Registry Office in the Gubbi Taluk Tumkur District. were published for the information of public vide this office No. MV/SC/21/2012-13, Dated: 19.05.2012 In all public Office notice board inviting objection and suggestion from all person likely to be effected there by within 15 day from the date of the publication and finally this estimated value guideline rates were approved by the Central Valuation committee meeting held on 25/05/2013.

### Sub-Registry Office, Gubbi Taluk, Tumkur District.

And whereas objections and suggestions received have been considered by the central valuation committee constituted for the purpose

Now therefore, in exercise of the powers conferred under section 45 (B) Of Karnataka Stamp Act 1957 read with Rule 7 (3) Of Karnataka Stamp (Constitution of Central Valuation Committee for Estimation, Publication & Revision of Market Value Guidelines of Properties) Rules 2003 the central Valuation Sub committee hereby publish the Market Value Guidance rates of the immovable properties in the jurisdiction of the above sub-Registry Office Gubbi Taluk Tumkur District as noted in the annexure along with policy to be adopted

This shall into effect from 01.06.2013.

By order and in the Name of Central Valuation Committee, Bangalore
**D. Shivakumar**
Secretary
Central Valuation Sub Committee,
Gubbi Taluk, Tumkur District.

ಗುಬ್ಬಿ ತಾಲ್ಲೂಕು ಉಪನೋಂದಣಾಧಿಕಾರಿಗಳ ಕಛೇರಿಯ ವ್ಯಾಪ್ತಿಗೆ ಬರುವ ಸ್ಥಿರಾಸ್ತಿಗಳ ಪರಿಷ್ಕೃತ ಮಾರುಕಟ್ಟೆ ಬೆಲೆ ಪಟ್ಟಿ

ಗುಬ್ಬಿ ಕಸಬಾ ಹೋಬಳಿ

| ಕ್ರ. ಸಂ. | ಗ್ರಾಮಗಳ ಹೆಸರು | ಗ್ರಾಮ ಠಾಣಕ್ಕೆ ಲಗತ್ತಿಲ್ಲದ ಸರ್ವೆ ನಂಬರ್ ಸ್ವತ್ತುಗಳ ಮಾರುಕಟ್ಟೆ ಬೆಲೆ | | | ಗ್ರಾಮ ಠಾಣಾ, ರಾಜ್ಯ ರಸ್ತೆ ಮತ್ತು ಚಾನಲ್‌ಗಳಿಗೆ ಲಗತ್ತಾದ ಸ್ವತ್ತುಗಳ ಮಾರುಕಟ್ಟೆ ಬೆಲೆ | | | | |
|---|---|---|---|---|---|---|---|---|---|
| | | ಖುಷ್ಕಿ | ತರಿ | ಭಾಗಾಯ್ತು | ಖುಷ್ಕಿ | ತರಿ | ಭಾಗಾಯ್ತು | ನಿವೇಶನ | ಸರ್ವೆ ನಂಬರ್ |
| **1** | **2** | **3** | **4** | **5** | **6** | **7** | **8** | **9** | **10** |
| 1 | ಅಡಗೂರು | 203000 | 300000 | 569000 | 228000 | 244000 | 740000 | 40 | ಗ್ರಾ.ಠಾ.ಲ1, 2, 3, 4, 5, 6, 7, 8, 9, 10, 11, 12, 13, 14, 15 |
| | | | | | 252000 | 268000 | 829000 | | ಚಾ.ಲ: 16, 26 |
| 2 | ಅಮ್ಮನಘಟ್ಟ | 163000 | 250000 | 325000 | 182000 | 275000 | 425000 | 60 | ಗ್ರಾ.ಠಾ.ಲ 83, 85, 86, 88, 89, 80, 90, 219, 1, 10, 9 |
| | | | | | 215000 | 280000 | 472000 | | ಗ್ರಾ.ರ.ಲ 28, 27, 33, 20, 23, 25 |
| 3 | ಕಟ್ಟಿಗೇನಹಳ್ಳಿ | 130000 | 163000 | 244000 | 147000 | 195000 | 317000 | 40 | ಗ್ರಾ.ಠಾ.ಲ, 15, 16, 12, 11, 18, 83, 84, 85, 86, 82, 83, 53, 58, 44, 42, 38, 34, 39, 41, 54 |
| | | | | | 163000 | 220000 | 350000 | | ಗ್ರಾ.ರ.ಲ 91, 29, 28, 88, 89, 98, 133, 102, 9, 122, 128 |
| | | | | | 182000 | 244000 | 390000 | | ಚಾ.ಲ:,108, 129, 143, 145, 148, 103, 109, 110, 115, 116, 108, 105, 106, 107 |
| 4 | ಕಳ್ಳಿಪಾಳ್ಯ | 488000 | 500000 | 600000 | 590000 | 645000 | 779000 | 50 | ಗ್ರಾ.ಠಾ.ಲ 6, 9, 0, 7, 19, 22, 16, 23 |
| | | | | | 654000 | 715000 | 913000 | | ಗ್ರಾ.ರ.ಲ 40, 41, 44, 46, 23, 24, 53, 52, 51, 50, 47, 48, 22 |
| | | | | | 734000 | 787000 | 979000 | | ಚಾ.ಲ 64, 63 |
| 5 | ಕಿಟ್ಟದಕುಪ್ಪೆ | 163000 | 205000 | 325000 | 182000 | 244000 | 423000 | 30 | ಗ್ರಾ.ಠಾ.ಲ– 1, 8, 2, 22, 6, 67 ,65, 74 |
| | | | | | 195000 | 244000 | 390000 | | ಗ್ರಾ..ರ.ಲ 98, 79, 80, 81 |
| 6 | ಕಾಳೇನಹಳ್ಳಿ | 163000 | 204000 | 407000 | 189000 | 257000 | 582000 | 40 | ಗ್ರಾ.ಠಾ.ಲ– 1, 26, 30 |
| | | | | | 205000 | 257000 | 512000 | | ಗ್ರಾ.ರ.ಲ: 37, 69, 34, 90 |
| | | | | | 224000 | 282000 | 583000 | | ಚಾ.ಲ – 26, 20, 5 |
| 7 | ಎಸ್. ಕೊಡಿಗೇಹಳ್ಳಿ | 163000 | 204000 | 407000 | 189000 | 257000 | 555000 | 40 | ಗ್ರಾ.ಠಾ.ಲ– 1, 4, 5, 179, 185 |
| | | | | | 205000 | 257000 | 512000 | | ಗ್ರಾ.ಠಾ.ಲ:144, 127, 129, 205, 209, 210, 206, 104, 167, 147, 145, |
| | | | | | 224000 | 282000 | 555000 | | ಚಾ.ಲ– 86, 87, 83, 92 ,82, 94, 200, 95, 96, 97, 198, 200, 210, 197, 5, 6, 7, 31, 28, 30, 36, 39, 84, 85 |

| ಕ್ರ. ಸಂ. | ಗ್ರಾಮಗಳ ಹೆಸರು | ಗ್ರಾಮ ಠಾಣಕ್ಕೆ ಲಗತ್ತಿಲ್ಲದ ಸರ್ವೆ ನಂಬರ್ ಸ್ವತ್ತುಗಳ ಮಾರುಕಟ್ಟೆ ಬೆಲೆ | | | ಗ್ರಾಮ ಠಾಣಾ, ರಾಜ್ಯ ರಸ್ತೆ ಮತ್ತು ಚಾನಲ್‌ಗಳಿಗೆ ಲಗತ್ತಾದ ಸ್ವತ್ತುಗಳ ಮಾರುಕಟ್ಟೆ ಬೆಲೆ | | | | |
|---|---|---|---|---|---|---|---|---|---|
| | | ಖುಷ್ಕಿ | ತರಿ | ಭಾಗಾಯ್ತು | ಖುಷ್ಕಿ | ತರಿ | ಭಾಗಾಯ್ತು | ನಿವೇಶನ | ಸರ್ವೆ ನಂಬರ್ |
| **1** | **2** | **3** | **4** | **5** | **6** | **7** | **8** | **9** | **10** |
| 8 | ಗಳಗ | 130000 | 160000 | 244000 | 155000 | 171000 | 334000 | 30 | ಗ್ರಾ.ಠಾ.ಲ–1, 7, 2, 3, 18, 15, 13, 14, 10, 126, 131, 225, 226, 130, 129, 128, 123, 224, 220, 218, 215, 208 |
| | | | | | 171000 | 176000 | 305000 | | ಚಾ.ಲ 1, 16, 22, 49, 50 |
| 9 | ಗೊಲ್ಲಹಳ್ಳಿ | 130000 | 163000 | 244000 | 147000 | 195000 | 317000 | 30 | ಗ್ರಾ.ಠಾ.ಲ: 1, 16, 22, 49, 50 |
| 10 | ಗೋಪಾಲಪುರ | 163000 | 205000 | 325000 | 180000 | 244000 | 423000 | 30 | ಗ್ರಾ.ಠಾ.ಲ 1, 36, 38, 2, 46, 44, 40, 39, 87, 42 |
| 11 | ಗುಬ್ಬಿ ಕಸಬಾ | 350000 | 400000 | 500000 | 394000 | 493000 | 590000 | 60 | ಗ್ರಾ.ಠಾ.ಲ 1 ,2, 3, 4, 5, 355, 356, 77, 15, 11, 8, 69, 353, 8, 2, 84 |
| | | | | | 429000 | 537000 | 634000 | | ಗ್ರಾ.ರ.ಲ:45, 46, 47, 74, 73, 75, 76, 77, 78, 85, 88, 90, 95, 96, 97, 102, 252, 256, 265, 268, 304, 305, 307, 308, 309, 310, 326, 328, 330, 357, 358 |
| 12 | ಗುಬ್ಬಿ ಅಮಾನಿಕೆರೆ | 244000 | 343000 | 488000 | 269000 | 293000 | 634000 | 30 | ಗ್ರಾ.ರ.ಲ: 47, 49, 50, 48, 51, 393, 392, 394, 397, 395, 396, 398, 399 |
| 13 | ಚೆನ್ನಶೆಟ್ಟಿಹಳ್ಳಿ | 200000 | 250000 | 450000 | 232000 | 308000 | 667000 | 50 | ಗ್ರಾ.ಠಾ.ಲ– 113, 114, 111, 22, 37, 34, 35, 1 |
| | | | | | 247000 | 310000 | 615000 | | ಗ್ರಾ.ರ.ಲ 22, 60, 10, 37, 39 |
| 14 | ಚಿಕ್ಕನೆಟಗುಂಟೆ | 130000 | 204000 | 325000 | 147000 | 244000 | 423000 | 30 | ಗ್ರಾ.ಠಾ.ಲ– 1, 2, 3, 4, 17, 26, 27, 61, 29, 31, 59, 67 |
| | | | | | 163000 | 244000 | 390000 | | ಗ್ರಾ..ರ.ಲ 26, 27, 3, 10, 11, 12, 6, 38, 45, 46, 44, 53 |
| 15 | ಚಿಕ್ಕೋನಹಳ್ಳಿ | 215000 | 250000 | 410000 | 239000 | 257000 | 555000 | 40 | ಗ್ರಾ.ಠಾ.ಲ– 108, 107, 112, 114, 115, 116, 117, 118, 119, 124, 125, 127, 126, 128, 129 |
| | | | | | 282000 | 285000 | 512000 | | ಗ್ರಾ..ರ.ಲ:40, 38, 37, 28, 27, 25, 29, 36, 35, 94, 52, 54, 57, 55, 172, 173, 174, 191, 192, 197, 198, 196 |
| 16 | ಚೌಕೇನಹಳ್ಳಿ | 130000 | 163000 | 325000 | 147000 | 195000 | 423000 | 35 | ಗ್ರಾ.ಠಾ.ಲ– 1, 2, 3, 10, 19, 20, 22, 47, 48, 52 |
| | | | | | 163000 | 195000 | 390000 | | ಗ್ರಾ..ರ.ಲ 13, 14, 15, 16, 17, 18, 19 |

| ಕ್ರ. ಸಂ. | ಗ್ರಾಮಗಳ ಹೆಸರು | ಗ್ರಾಮ ಠಾಣಕ್ಕೆ ಲಗತ್ತಿಲ್ಲದ ಸರ್ವೆ ನಂಬರ್ ಸ್ವತ್ತುಗಳ ಮಾರುಕಟ್ಟೆ ಬೆಲೆ | | | ಗ್ರಾಮ ಠಾಣಾ, ರಾಜ್ಯ ರಸ್ತೆ ಮತ್ತು ಚಾನಲ್‌ಗಳಿಗೆ ಲಗತ್ತಾದ ಸ್ವತ್ತುಗಳ ಮಾರುಕಟ್ಟೆ ಬೆಲೆ | | | | |
|---|---|---|---|---|---|---|---|---|---|
| | | ಖುಷ್ಕಿ | ತರಿ | ಭಾಗಾಯ್ತು | ಖುಷ್ಕಿ | ತರಿ | ಭಾಗಾಯ್ತು | ನಿವೇಶನ | ಸರ್ವೆ ನಂಬರ್ |
| **1** | **2** | **3** | **4** | **5** | **6** | **7** | **8** | **9** | **10** |
| 17 | ತೊರೆಹಳ್ಳಿ | 160000 | 190000 | 325000 | 170000 | 210000 | 445000 | 45 | ಗ್ರಾ.ಠಾ.ಲ 1/1, 1/2, 3, 12/1, 16/3, 18/1, 19, 23, 24, 22/2, 27/2, 27/10, 28, 17, 32, 54/1, 36/1, 36/1, 36/1, 54/2, 24 /2, 54/ 2284/4, 55/6, 72, 77, 85/2, 87/2, 87/3, 87/5, 87, 56/1, 56/3, 56/4 |
| | | | | | 172000 | 205000 | 410000 | | ಗ್ರಾ.ರ.ಲ 19/2, 19, 20, 61/4, 61/5, 61/6 |
| | | | | | 187000 | 223000 | 444000 | | ಚಾ.ಲ 46, 55/3, 63, 65/9, 72, 72/5, 72/6, 72/7 |
| 18 | ತೋಟಸಾಗರ | 98000 | 130000 | 163000 | 114000 | 163000 | 212000 | 35 | ಬೇಚಾರಕ್ |
| 19 | ತಿಪ್ಪೂರು | 130000 | 146250 | 243750 | 154375 | 186875 | 341250 | 30 | ಗ್ರಾ.ಠಾ.ಲ 1. 2. 21. 22. 23 |
| | | | | | 172000 | 187000 | 208000 | | ಗ್ರಾ.ರ.ಲ 221, 220, 215, 214, 213, 212, 206, 21, 39, 38, 37, 36, 32, 27, 26, 23 |
| 20 | ಧೂಳನಹಳ್ಳಿ | 163000 | 195000 | 205000 | 179000 | 195000 | 269000 | 25 | ಗ್ರಾ..ಠಾ.ಲ 19, 20, 18, 17, 28, 27, 26, 25 |
| 21 | ದೊಡ್ಡನೆಟಗುಂಟೆ | 130000 | 147000 | 205000 | 147000 | 179000 | 269000 | 30 | ಗ್ರಾ.ಠಾ.ಲ– 2, 9, 1, 22, 23, 25, 26, 70, 74 |
| | | | | | 163000 | 179000 | 245000 | | ಗ್ರಾ.ರ.ಲ 24, 25, 20, 32, 33, 44, 45, 30, 59, 47 |
| 22 | ದೊಡ್ಡನೆಟಗುಂಟೆ ಅಮಾನಿಕೆರೆ | 130000 | 163000 | 245000 | – | – | – | 30 | – |
| 23 | ದೊಡ್ಡೇರಿ | 98000 | 163000 | 205000 | 114000 | 195000 | 269000 | 35 | ಗ್ರಾ.ಠಾ.ಲ– 19, 20, 22, 23, 25, 44, 45, 46, 27, 69, 7, 97, 98, 99, 110, 48, 49 |
| 24 | ನಾಗಸಂದ್ರ | 130000 | 163000 | 204000 | 147000 | 195000 | 269000 | 25 | ಗ್ರಾ.ಠಾ.ಲ– 1, 91, 87, 88, 138 |
| | | | | | 163000 | 195000 | 245000 | | ಗ್ರಾ.ರ.ಲ – 8, 9, 10, 138, 48 |
| | | | | | 179000 | 212000 | 269000 | | ಚಾ.ಲ – 121, 120, 109, 103, 121, 122 |
| 25 | ಪ್ರಭುವನಹಳ್ಳಿ | 147000 | 205000 | 245000 | 163000 | 245000 | 325000 | 35 | ಗ್ರಾ.ಠಾ.ಲ–162, 163, 164, 165, 157, 158, 159, 160, 161/1, 161/1, 161/2, 162/3, 162/2, 167 |
| | | | | | 179000 | 245000 | 295000 | | ಗ್ರಾ.ರ.ಲ 162, 163, 164, 165, 40/2 |
| | | | | | 195000 | 270000 | 325000 | | ಚಾ.ಲ 132, 133, 134, 135, 136, 137, 130, 128, 125, 126, 31/3, 31/1, 31/2, 28, 29, 30, 32, 32/2, 54/1, 54/2, 63/3, 60/1, 65/1, 67/3, 65, 64, 72/1, 33/1, 40/2 |

